KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೦, ೨೦೦೬ (ಚೈತ್ರ ೩೦, ಶಕ ವರ್ಷ ೧೯೨೮) | ಸಂಚಿಕೆ ೧೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ನಂ.ಡಿಆರ್/ ಡಿವಿಜಿ/ ಸಮಾಪನೆ:ಸಿಆರ್-65/ 1997-98, ದಿನಾಂಕ: 28ನೇ ಜನವರಿ, 2006**

**ವಿಷಯ:** ಸಮಾಪನೆಗೊಂಡ ಕೆ. ಕಲ್ಲಹಳ್ಳಿ ಬ್ಲಾಕ್ ಸ್ಮಿತ್ ಕೈಗಾರಿಕಾ ಸಹಕಾರ ಸಂಘ ನಿ., ಕೆ.ಕಲ್ಲಹಳ್ಳಿ ತಾಲ್ಲೂಕು, ಹರಪನಹಳ್ಳಿ ಇದರ ನೋಂದಣಿ ಸಂಖ್ಯೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ರದ್ದುಪಡಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** (1) ಸಂಘದ ಸಮಾಪನಾ ಆದೇಶ ಸಂಖ್ಯೆ: ಉನಿಅ:ವಿ10: ಸಮಾಪನೆ: 65: 97-98 ದಿನಾಂಕ: 31.03.1998.

(2) ಸಮಾಪನಾಧಿಕಾರಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರ ಪ್ರಸ್ತಾವೆ ದಿನಾಂಕ: 23.01.2006.

(3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವೆ ಸಂಖ್ಯೆ: ಸನಿ: ಹೆಚ್‌ಆರ್‌ಪಿ: ಸಮಾಪನೆ: 2005-06 ದಿನಾಂಕ: 24.01.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ನಂ.712, ದಿನಾಂಕ: 03.12.1955 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಉಲ್ಲೇಖ (1)ರಲ್ಲಿ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳೂ ಆಸ್ತಿ ಜವಾಬ್ದಾರಿಯನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ದಿನಾಂಕ: 18.01.2006ರಂದು ಜರುಗಿದ ಸಮಾಪನಾಧಿಕಾರಿಗಳ ಸಭೆಯಲ್ಲಿ ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಇವರನ್ನು ಕೋರಲು ತೀರ್ಮಾನಿಸಿ ಸೂಕ್ತ ಪ್ರಸ್ತಾವನೆಯನ್ನು ಉಲ್ಲೇಖ (2)ರ ಪತ್ರದ ರೀತ್ಯಾ ಸಲ್ಲಿಸಿರುತ್ತಾರೆ. ಉಲ್ಲೇಖ (3)ರಲ್ಲಿ ಸಹಕಾಖು ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಸಹ ಸದರಿ ಸಂಘದ ನೋಂದಣಿ ಸಂಖ್ಯೆ: 712 ದಿನಾಂಕ: 03.12.1955ನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವೆ ಅಂಶಗಳನ್ನು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎನ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಕೆ.ಎಂ. ಆಶಾ, ಆದ ನಾನು ಸಮಾಪನೆಗೊಂಡ ಕೆ. ಕಲ್ಲಹಳ್ಳಿ ಕಮ್ಮಾರಿಕೆ ಕೈಗಾರಿಕಾ ಸಹಕಾರ ಸಂಘ ನಿ., ಕೆ.ಕಲ್ಲಹಳ್ಳಿ ಹರಪನಹಳ್ಳಿ ತಾಲ್ಲೂಕು, ಇದರ ನೊಂದಣಿ ಸಂಖ್ಯೆ: 712 ದಿನಾಂಕ: 03.12.1955 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘಗಳ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲ. ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 23(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 25.01.2006ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿಆರ್. 246

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು**
**ಗುನ್ಹೆ ನಂ.06/2004-05, ದಿನಾಂಕ:25ನೇ ಅಕ್ಟೋಬರ್, 2004**
**ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ**

**ನಂ. ಇಎಕ್ಸ್‌ಇ: ಬಿಜೆಪಿ: ಸಿಆರ್‌ಎಂ: ಡಿಟಿಸಿಆರ್:30/ 2004-05, ದಿನಾಂಕ: 12ನೇ ಜನವರಿ, 2006**

**ಉಪಸ್ಥಿತರು:** ಕೆ.ಆರ್. ಗೌಡ್ರ

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

| ಪಿರ್ಯಾಧಿದಾರರು | | ಆರೋಪಿತರು |
|---|---|---|
| ಅಬಕಾರಿ ಉಪ ನಿರೀಕ್ಷಕರು, ಬಿಜಾಪುರ ಉಪವಿಭಾಗ, ಬಿಜಾಪುರ. | **ವಿರುದ್ಧ** | 1. ಪ್ರಲ್ಹಾದ ರಾಮು ರಾಠೋಡ, ಸಾ: ಮುಳವಾಡ ತಾಂಡಾ ನಂ.2.<br>2. ಥಾವರು ಧನಸಿಂಗ್ ಜಾಧವ, ಸಾ: ಮುಳವಾಡ ತಾಂಡಾ ನಂ.2.<br>3. ಅಬ್ದುಲ್ ರಜಾಕ್ ಸೈಯದ್‌ಸಾಬ ಇನಾಮದಾರ, ಸಾ: ಝುಂಡಾ ಕಟ್ಟೆ ಹತ್ತಿರ ಬಿಜಾಪುರ (ವಾಹನದ ಮಾಲಿಕರು) |

**ಪ್ರಕರಣದ ಹಿನ್ನೆಲೆ:**

ದಿನಾಂಕ:25.10.2004ರಂದು ಸಂಜೆ 7.00 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ ಇವರು ಪಂಚರನ್ನು ಕರೆದುಕೊಂಡು ಮತ್ತು ಸಿಬ್ಬಂದಿ ಜನರೊಂದಿಗೆ ಬಿಜಾಪುರ ತಾಲ್ಲೂಕಿನ ಹೊನಗನಹಳ್ಳಿ ಹತ್ತಿರ ಇರುವ ರೈಲ್ವೆ ಗೇಟ್ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ ಬಿಜಾಪುರ ಕಡೆಯಿಂದ ಒಂದು ವಾಹನ ಬಂದಿತ್ತು. ಕತ್ತಲಲ್ಲಿ ಅಡಗಿದ ಅಬಕಾರಿ ಸಿಬ್ಬಂದಿ ಜನರು ವೇಗದಿಂದ ಬಂದ ಆ ವಾಹನವನ್ನು ತಡೆಗಟ್ಟಿ ಅದನ್ನು ನಿಲ್ಲಿಸಿದರು. ಆಗ ಸಮಯ ರಾತ್ರಿ 8.00 ಆಗಿತ್ತು. ವಾಹನದ ಒಳಗಡೆ ಮೂರು (3) ವ್ಯಕ್ತಿಗಳು ಕುಳಿತಿದ್ದರು. ವಾಹನವು ಒಂದು ಬಿಳಿಯ ಬಣ್ಣದ ಹಳೆಯ ಅಂಬಾಸಿಡರ್ ಕಾರು ಅದರ ನಂ.ಕೆಎ.28.ಎಂ.1389 ಆಂಗ್ಲ ಭಾಷೆಯಲ್ಲಿ ಬರೆಯಲಾಗಿತ್ತು. ವಾಹನದ ಒಳಗಡೆಯಿಂದ ಹುಳಿಯ ಘಾಟ್ ವಾಸನೆ ಬರುತ್ತಿತ್ತು. ಬಾಗಿಲು ತೆಗೆದು ನೋಡಿದಾಗ ಮೂರು (3) ಬಿಳಿಯ ಬಣ್ಣದ ಗೊಬ್ಬರ ಚೀಲಗಳು ಕಂಡುಬಂದು ಕಾರಿನ ಹಿಂಭಾಗದ ಡಿಕ್ಕಿಯನ್ನು ತೆಗೆಯಲಾಗಿ ಅದರಲ್ಲಿ ಐದು (5) ಬಿಳಿಯ ಬಣ್ಣದ ಗೊಬ್ಬರ ಚೀಲಗಳು ಕಂಡವು. ಎಲ್ಲಾ ಚೀಲಗಳು ಬಿಚ್ಚಿ ನೋಡಲಾಗಿ ಅವುಗಳಲ್ಲಿ ಕಳ್ಳಭಟ್ಟಿ ಸಾರಾಯಿ ಸ್ಯಾಚೆಟ್‌ಗಳು ಇದ್ದದ್ದು ಕಂಡುಬಂದವು. ಅದು ಕಳ್ಳಭಟ್ಟಿ ಸಾರಾಯಿ ಎಂಬುದು ಮೇಲ್ನೋಟಕ್ಕೆ ಸಾಭೀತಾಯಿತು. ಈ ಅಕ್ರಮ ಸಾಗಾಣಿಕೆ ಬಗ್ಗೆ ಕೇಳಿದಾಗ ಅವರು ಸಮರ್ಪಕ ಉತ್ತರ ನೀಡಲಿಲ್ಲ. ವಾಹನವನ್ನು ಬದಿಗೆ ಬಿಟ್ಟು ನೋಡಲಾಗಿ ಪ್ರತಿಯೊಂದು ಚೀಲದಲ್ಲಿ 200 ಮಿಲಿಯ 200 ಸ್ಯಾಚೆಟ್‌ಗಳಂತೆ 1600 ಸ್ಯಾಚೆಟ್‌ಗಳಿದ್ದವು. ಒಟ್ಟು 320.000 ಲೀಟರ್ ಕಳ್ಳಭಟ್ಟಿ ಸಾರಾಯಿ ಸಿಕ್ಕಿತು. ಆರೋಪಿತರನ್ನು ಹೆಸರು ಕೇಳಲಾಗಿ ಅವರು ತಮ್ಮ ಹೆಸರು (1) ಪ್ರಲ್ಹಾದ ರಾಮು ರಾಠೋಡ ಸಾ: ಮುಳವಾಡ ತಾಂಡಾ ನಂ.2, (2) ಥಾವರು ಧನಸಿಂಗ್ ಜಾಧವ ಸಾ: ಮುಳವಾಡ ತಾಂಡಾ ನಂ.2, (3) ಅಬ್ದುಲ್ ರಜಾಕ್ ಸಯ್ಯದಸಾಬ ಇನಾಮದಾರ ಸಾ: ಝುಂಡಾ ಕಟ್ಟೆ ಹತ್ತಿರ ಬಿಜಾಪುರ ಎಂದು ಹೇಳಿದರು. ಪ್ರತಿಯೊಂದು ಚೀಲದಿಂದ ಎರಡರಂತೆ 16 ಸ್ಯಾಚೆಟ್‌ಗಳನ್ನು ಮಾದರಿಯಾಗಿ ತೆಗೆದು ಶೀಲು ಮಾಡಿ ರಸಾಯನಿಕ ಪರೀಕ್ಷೆಗಾಗಿ ತೆಗೆದರು. ಸವಿಸ್ತಾರವಾದ ಪಂಚನಾಮೆಯನ್ನು ಪಂಚರ ಸಮಕ್ಷಮ ಬರೆದು ಮುಗಿಸಿರುತ್ತಾರೆ. ಮತ್ತು ಪ್ರಕರಣವನ್ನು ದಾಖಲು ಮಾಡಿಕೊಂಡು ಆರೋಪಿಗಳನ್ನು ನ್ಯಾಯಾಲಯ ವಶಕ್ಕೆ ಒಪ್ಪಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಥಮ ವರ್ತಮಾನ ವರದಿ ಮತ್ತು ಪಂಚನಾಮೆ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ರಸಾಯನಿಕ ಮಾದರಿಗಳನ್ನು ರಸಾಯನಿಕ ತಜ್ಞರಿಗೆ ಪರೀಕ್ಷೆಗೋಸ್ಕರ ಕಳುಹಿಸಿ, ರಸಾಯನಿಕ ತಜ್ಞರ ವರದಿಯನ್ನು ಪಡೆದಿರುತ್ತಾರೆ. ಸದರಿ ರಸಾಯನ ತಜ್ಞರ ವರದಿ ಸಂಖ್ಯೆ: ಸಿಸಿಎಲ್ 4627/ 2004 ಯಲ್ಲಿ ಜಪ್ತು ಮಾಡಿದ ಕಳ್ಳಭಟ್ಟಿ ಸಾರಾಯಿಯಲ್ಲಿ ಮದ್ಯಸಾರದ ಅಂಶ ಇದ್ದು, ಮಾನವ ಸೇವನೆಗೆ ಯೋಗ್ಯ ಇರುವುದಿಲ್ಲ ಎಂದು ದೃಢಪಡಿಸಿರುತ್ತಾರೆಂದು ಅಬಕಾರಿ ಉಪ ನಿರೀಕ್ಷಕರು ಗ್ರಾಮೀಣ ಉಪವಲಯರವರು ವರದಿ ಸಲ್ಲಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪುರ ಇವರಿಗೆ ಸದರಿ ವಾಹನದ ಮಾಲಿಕರ ಹೆಸರು ಮತ್ತು ವಿಳಾಸ ಕುರಿತು ಬಿ-ಎಕ್ಸ್‌ಟ್ರ್ಯಾಕ್ಟ್ ಕಳುಹಿಸಲು ಪತ್ರ ಬರೆದು, ಸದರಿ ಸಾರಿಗೆ ಅಧಿಕಾರಿಗಳಿಂದ ಬಿ-ಎಕ್ಸ್‌ಟ್ರ್ಯಾಕ್ಟ್ ಪಡೆದುಕೊಂಡಿದ್ದು, ಸದರಿ ವರದಿಯಲ್ಲಿ ವಾಹನ ಸಂಖ್ಯೆ: ಕೆಎ-28-ಎಂ-1389 ಅಂಬಾಸಿಡರ್ ಕಾರ್ ಇದ್ದು, ಸದರಿ ವಾಹನ ಮಾಲಿಕರ ಹೆಸರು ಅಬ್ದುಲ್‌ರಜಾಕ್ ತಂದೆ ಸೈಯದ್‌ಸಾಬ್ ಇನಾಮದಾರ್, ಝುಂಡಾ ಕಟ್ಟೆ ಹತ್ತಿರ-32, ಬಿಜಾಪುರ ಅಂಥ ದೃಢಪಡಿಸಿರುತ್ತಾರೆ.

ಸದರಿ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-28-ಎಂ-1389ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಜಪ್ತು ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ನಿಯಮಗಳ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ. ಆದ್ದರಿಂದ ಈ ಪ್ರಕ್ರಿಯೆ ಮಾಡುವ ಮುನ್ನ ಈ ಪ್ರಾಧಿಕಾರವು ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ದಿನಾಂಕ: 17.11.2004 ರಂದು ವಾಹನ ಮಾಲಿಕರಿಗೆ ಕಾರಣ ಕೇಳುವ ನೋಟೀಸು ಹೊರಡಿಸಲಾಯಿತು. ಆದರೆ ವಾಹನ ಮಾಲಿಕರು ಆದರಿ ಕಾರಣ ಕೇಳುವ ನೋಟಿಸಿನಲ್ಲಿ ನೀಡಿದ ಅವಧಿ ಒಳಗಾಗಿ ಯಾವುದೇ ರೀತಿಯ ಲಿಖಿತ ಉತ್ತರ ಸಲ್ಲಿಸಿರುವುದಿಲ್ಲ. ಆದರೆ ದಿನಾಂಕ: 26.11.2004ರಂದು ವಾಹನ ಮಾಲಿಕರ ಪರವಾಗಿ ವಕೀಲರಾದ ಶ್ರೀ ಡಿ.ಎಂ. ಮುಲ್ಲಾ ಇವರ ಸದರಿ ವಾಹನವನ್ನು ಪ್ರಕರಣ ಇತ್ಯರ್ಥವಾಗುವವರೆಗೆ ತಾತ್ಕಾಲಿಕವಾಗಿ ಬಿಡಲು ಕೋರಿ ಈ ಪ್ರಾಧಿಕಾರದ ಮುಂದೆ ವಕಾಲತು ಸಲ್ಲಿಸಿರುತ್ತಾರೆ. ಆದರೆ ಈ ಪ್ರಾಧಿಕಾರವು ಸದರಿ ವಾಹನದ ಪ್ರಕರಣವನ್ನು ವಿಚಾರಣೆ ಕುರಿತು ದಿನಾಂಕ ನಿಗದಿಪಡಿಸಿ ವಾಹನ ಮಾಲಿಕರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ ನೋಟಿಸ್ ನೀಡಿ ಪ್ರಕರಣವನ್ನು ವಿಚಾರಣೆ ನಡೆಸಲಾಯಿತು.

ಪ್ರಾಸಿಕ್ಯೂಷನ್ ಪರವಾಗಿ ಮೂರು (3) ಸಾಕ್ಷಿದಾರರ ಸಾಕ್ಷ್ಯವನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ, ನಿಶಾನೆ ಪಿ-1 ರಿಂದ ನಿಶಾನೆ ಪಿ-4 ಎಂದು ಮತ್ತು ಮುದ್ದೇಮಾಲನ್ನು 1 ಹಾಗೂ 2 ಎಂದು ಗುರುತಿಸಿಕೊಳ್ಳಲಾಯಿತು. ಆದರೆ ವಾಹನ ಮಾಲಿಕರು ಸದರಿ ದಿನಾಂಕದಂದು ಈ ಪ್ರಾಧಿಕಾರದ ಮುಂದೆ ಹಾಜರು ಇರುವುದಿಲ್ಲಾ.

ಪ್ರಾಸಿಕ್ಯೂಷನ್ ಪರ ಸಾಕ್ಷಿ ನುಡಿದ ಪಿರ್ಯಾಧಿದಾರರು ಪ್ರಾ.ಸಾ. -1 ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ: 04.04.2001ರಿಂದ 28.05.2005 ರವರೆಗೆ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗದಲ್ಲಿ ಕೆಲಸ ನಿರ್ವಹಿಸಿದ್ದೇನೆ. ದಿನಾಂಕ: 25.10.2004 ರಂದು ಸಂಜೆ 7.30 ಗಂಟೆಗೆ ನಾನು ಹಾಗೂ ಅಬಕಾರಿ ನಿರೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಪಂಚರ ಸಮೇತ ಬಿಜಾಪುರ ಶಹರದಲ್ಲಿ ಗಸ್ತು ತಿರುಗಿ ನಂತರ ಜಮಖಂಡಿ ಕ್ರಾಸ್‌ನಲ್ಲಿ ರಸ್ತೆ ಕಾವಲು ನಡೆಸಿ ಬಿಜಾಪುರದಿಂದ ಹೊನಗನಹಳ್ಳಿಗೆ ಹೋಗುವ ರಸ್ತೆಯಲ್ಲಿರುವ (ಬಿಜಾಪುರ

ಕಡೆಯಿಂದ) ರೈಲ್ವೆ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ಇದ್ದೆವು. 8.00 ಗಂಟೆ ಸುಮಾರಿಗೆ ಹೊನಗನಹಳ್ಳಿ ಕಡೆಯಿಂದ ಒಂದು ವಾಹನವು ವೇಗವಾಗಿ ಬಿಜಾಪುರ ಕಡೆಗೆ ಬಂದಿತು. ನಾವು ಸಿಬ್ಬಂದಿ ಜನರು ವಾಹನವನ್ನು ತಡೆದು ವಾಹನವನ್ನು ತಪಾಸಿಸಲಾಗಿ ಅದು ಒಂದು ಬಿಳಿಯ ಬಣ್ಣದ ಹಳೆಯ ಅಂಬಾಸಿಡರ್ ಕಾರ್ ಆಗಿತ್ತು. ಕಾರಿನಲ್ಲಿ ಬ್ಯಾಟರಿ ಬೆಳಕನ್ನು ಬಿಟ್ಟು ನೋಡಲಾಗಿ ಅದರಲ್ಲಿ ಮೂರು (3) ವ್ಯಕ್ತಿಗಳು ಇದ್ದು, ಕಾರಿನ ಸೀಟಿನಲ್ಲಿ ಮೂರು (3) ಬಿಳಿಯ ಬಣ್ಣದ ಗೊಬ್ಬರ ಚೀಲಗಳು ಕಂಡು ಬಂದವು. ಹಾಗೂ ಕಾರಿನಿಂದ ಫಾಟ್ ವಾಸನೆ ಬರುತ್ತಿತ್ತು. ಈ ಬಗ್ಗೆ ಕಾರಿನಲ್ಲಿರುವವರನ್ನು ವಿಚಾರಿಸಲಾಗಿ ಅವರು ಸಮರ್ಪಕವಾಗಿ ಉತ್ತರ ನೀಡಲಿಲ್ಲ. ಚೀಲಗಳನ್ನು ತೆಗೆದು ನೋಡಲಾಗಿ ಅವುಗಳಲ್ಲಿ ಕಳ್ಳಭಟ್ಟಿ ಸಾರಾಯಿ ಸ್ಯಾಚೆಟ್‌ಗಳು ಇದ್ದವು. ನಂತರ ಕಾರಿನ ಹಿಂದಿನ ಡಿಕ್ಕಿಯಲ್ಲಿ ತೆಗೆದು ನೋಡಲಾಗಿ ಅಲ್ಲಿಯೂ ಐದು (5) ಬಿಳಿಯ ಬಣ್ಣದ ಗೊಬ್ಬರ ಚೀಲಗಳು ಕಂಡುಬಂದವು. ಪಂಚರ ಸಮಕ್ಷಮ ಅವುಗಳನ್ನು ತೆಗೆದು ನೋಡಲಾಗಿ ಅವುಗಳಲ್ಲಿಯೂ ಸಹ ಕಳ್ಳಭಟ್ಟಿ ಸಾರಾಯಿ ಸ್ಯಾಚೆಟ್‌ಗಳು ಇದ್ದವು. ಪಂಚರ ಸಮಕ್ಷಮದಲ್ಲಿ ಕಾರಿನಲ್ಲಿದ್ದ ಮೂರು (3) ವ್ಯಕ್ತಿಗಳ ಹೆಸರು ಕೇಳಲಾಗಿ ಡ್ರೈವರ್ ಸೀಟಿನಲ್ಲಿದ್ದ ವ್ಯಕ್ತಿಯು ತನ್ನ ಹೆಸರು ಅಬ್ದುಲ್ ರಜಾಕ್ ಸಯ್ಯದಸಾಬ್ ಇನಾಮದಾರ್, ಸಾ: ಬಿಜಾಪುರ ಮತ್ತು ಮತ್ತೊಬ್ಬನು ತನ್ನ ಹೆಸರು ಪ್ರಲ್ಹಾದ ರಾಮು ರಾಠೋಡ, ಸಾ: ಮುಳವಾಡ, ಇನ್ನೊಬ್ಬ ತನ್ನ ಹೆಸರು ಥಾವುರು ಧನಸಿಂಗ್ ಜಾಧವ್, ಸಾ: ಮುಳವಾಡ ಎಂದು ಹೇಳಿದರು. ಎಲ್ಲಾ ಮುದ್ದೇಮಾಲನ್ನು ವಾಹನ ಸಮೇತವಾಗಿ ಅಲ್ಲಿ ಕತ್ತಲು ಇದ್ದ ಕಾರಣ ಕಛೇರಿಗೆ ತಂದು ಪಂಚರ ಸಮಕ್ಷಮದಲ್ಲಿ ತಪಾಸಿಸಲಾಗಿ ಪ್ರತಿಯೊಂದು ಗೊಬ್ಬರ ಚೀಲದಲ್ಲಿ 200 ಮಿಲಿಯ ಒಟ್ಟು 1600 ಸ್ಯಾಚೆಟ್‌ಗಳು ಇದ್ದವು. ಪ್ರತಿಯೊಂದು ಚೀಲದಿಂದ 200 ಮಿಲಿಯ ಎರಡು ಸ್ಯಾಚೆಟ್‌ದಂತೆ ಒಟ್ಟು 16 ಸ್ಯಾಚೆಟ್‌ಗಳನ್ನು ರಸಾಯನಿಕ ಪರೀಕ್ಷೆಗೋಸ್ಕರ ಮಾದರಿಯಾಗಿ ತೆಗೆದು ಸದರಿ ಸ್ಯಾಚೆಟ್‌ಗಳಿಗೆ ನಮ್ಮ ಕಛೇರಿಯ ಶೀಲಿನಿಂದ ಶೀಲು ಮಾಡಿ ನಾವು ಹಾಗೂ ಪಂಚರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಲಾಯಿತು. ಪಂಚರ ಸಮಕ್ಷಮ ಸವಿಸ್ತಾರವಾದ ಪಂಚನಾಮೆ ಬರೆದು ಮುಗಿಸಲಾಯಿತು. ನಂತರ ಆರೋಪಿಗಳನ್ನು ಬಂಧಿಸಿ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಯಿತು. ಈಗ ಪಂಚನಾಮೆಯ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಮತ್ತು ಅದರ ಮೇಲಿರುವ ಸಹಿಯನ್ನು ನಿಶಾನೆ ಪಿ-1(ಎ) ಎಂದು ಗುರುತಿಸಲಾಯಿತು. ಮತ್ತು ಜಪ್ತು ಮಾಡಿದ ಅಂಬಾಸಿಡರ್ ಕಾರನ್ನು ನೋಡುತ್ತಿದ್ದು ಅದನ್ನು ಮುದ್ದೇಮಾಲು ನಂ.1 ಎಂದು ಗುರುತಿಸಲಾಯಿತು. ಹಾಗೂ ಜಪ್ತು ಮಾಡಿದ ಕಳ್ಳಭಟ್ಟಿ ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಮಾದರಿ ಸ್ಯಾಚೆಟ್‌ಗಳನ್ನು ಈಗ ನೋಡುತ್ತಿದ್ದು ಅವುಗಳಿಗೆ ಮುದ್ದೇಮಾಲು ನಂ.2 ಎಂದು ಗುರುತಿಸಲಾಯಿತು. ನಂತರ ಗುನ್ನೆ ದಾಖಲಿಸಿ, ಗುನ್ನೆ ಣ.06/ 2004-05 ದಿನಾಂಕ: 25.10.2004ರಂದು ಮಾನ್ಯ ನ್ಯಾಯಾಲಯಕ್ಕೆ ಪ್ರಥಮ ವರ್ತಮಾನ ವರದಿ ಹಾಗೂ ಪಂಚನಾಮೆ ಮತ್ತು ಬಂಧಿಸಿದ ಮೂರು (3) ಆರೋಪಿತರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಲಾಯಿತು. ಈಗ ಪ್ರಥಮ ವರ್ತಮಾನ ವರದಿಯನ್ನು ಪ್ರತಿಯನ್ನು ನೋಡುತ್ತಿದ್ದು ಅದನ್ನು ಈಗ ನಿಶಾನೆ ಪಿ-2 ಮತ್ತು ಅದರ ಮೇಲಿರುವ ತಮ್ಮ ಸಹಿ ಗುರುತಿಸಿ ಅದನ್ನು ನಿಶಾನೆ ಪಿ-2(ಎ) ಎಂದು ಗುರುತಿಸಲಾಯಿತು. ಮುಂದಿನ ತನಿಖೆಗೋಸ್ಕರ ವಾಹನ ಮತ್ತು ಮುದ್ದೇಮಾಲು ಹಾಗೂ ರಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಗಳನ್ನು ಮತ್ತು ಎಲ್ಲಾ ಸಂಬಂಧಿಸಿದ ಕಾಗದ ಪತ್ರಗಳನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪವಲಯ ಇವರಿಗೆ ಹಸ್ತಾಂತರ ಮಾಡಿರುತ್ತೇನೆ ಎಂದು ವಿವರವಾದ ಸಾಕ್ಷಿ ನುಡಿದಿರುವರು. ವಾಹನದ ಮಾಲಿಕರು ಹೇಳಿಕೆ ಸಮಯದಲ್ಲಿ ಗೈರು ಹಾಜರಿ ಇದ್ದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾ.ಸಾ. 2 ಪಂಚ ಸಾಕ್ಷಿಯಾಗಿ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ, ದಿನಾಂಕ: 25.10.2004ರಂದು ಸಂಜೆ 7.30 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ ಬಿಜಾಪುರ ಇವರು ನಮ್ಮನ್ನು ಕರೆಯಿಸಿ ನಾವುಗಳು ರಸ್ತೆ ಕಾವಲು ಮಾಡಲು ಮತ್ತು ಅಬಕಾರಿ ದಾಳಿ ಮಾಡಲು ಹೊರಟಿರುತ್ತೇವೆ. ಆ ಸಮಯದಲ್ಲಿ ಅಪರಾಧಗಳು ಪತ್ತೆ ಆದಲ್ಲಿ ಪಂಚರಾಗಲು ಬರಬೇಕೆಂದು ಕೇಳಿಕೊಂಡ ಮೇರೆಗೆ ನಾವುಗಳು ಒಪ್ಪಿಕೊಂಡು ಅಬಕಾರಿಯವರೊಂದಿಗೆ ಹೊರಟೆವು. ಹೊನಗನಹಳ್ಳಿಗೆ ಹೋಗುವ ರಸ್ತೆಯಲ್ಲಿರುವ (ಬಿಜಾಪುರ ಕಡೆಯಿಂದ) ರೈಲ್ವೆ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ಇದ್ದೆವು. ರಾತ್ರಿ 8.00 ಗಂಟೆ ಸುಮಾರಿಗೆ ಹೊನಗನಹಳ್ಳಿ ಕಡೆಯಿಂದ ಒಂದು ವಾಹನವು ವೇಗವಾಗಿ ಬಿಜಾಪುರ ಕಡೆಗೆ ಬಂದಿತು. ನಾವು ಸಿಬ್ಬಂದಿ ಜನರು ವಾಹನವನ್ನು ತಡೆದು ವಾಹನವನ್ನು ತಪಾಸಿಸಲಾಗಿ ಅದು ಒಂದು ಬಿಳಿಯ ಬಣ್ಣದ ಹಳೆಯ ಅಂಬಾಸಿಡರ್ ಕಾರ ಆಗಿತ್ತು. ಕಾರಿನಲ್ಲಿ ಬ್ಯಾಟರಿ ಬೆಳಕನ್ನು ಬಿಟ್ಟು ನೋಡಲಾಗಿ ಅದರಲ್ಲಿ ಮೂರು (3) ವ್ಯಕ್ತಿಗಳು ಇದ್ದು, ಕಾರಿನ ಹಿಂದಿನ ಸೀಟಿನಲ್ಲಿ ಮೂರು (3) ಬಿಳಿಯ ಬಣ್ಣದ ಗೊಬ್ಬರ ಚೀಲಗಳು ಕಂಡು ಬಂದವು. ಹಾಗೂ ಕಾರಿನಿಂದ ಫಾಟ್ ವಾಸನೆ ಬರುತ್ತಿತ್ತು. ಅಬಕಾರಿ ಅಧಿಕಾರಿಗಳು ಸದರಿ ಕಾರಿನಲ್ಲಿ ಏನು ಒಯ್ಯುತ್ತಿರುವಿರೆಂದು ಕೇಳಿದಾಗ ಕಳ್ಳಭಟ್ಟಿ ಸಾರಾಯಿ ತುಂಬಿದ ಪಾಕೀಟ್‌ಗಳನ್ನು ತೆಗೆದುಕೊಂಡು ಹೋಗುತ್ತಿದ್ದೇವೆಂದು ಹೇಳಿದ್ದು, ಕಾರಿನ ಹಿಂದಿನ ಡಿಕ್ಕಿಯನ್ನು ತೆಗೆದು ನೋಡಲಾಗಿ ಅಲ್ಲಿಯೂ ಸಹ ಐದು (5) ಬಿಳಿಯ ಬಣ್ಣದ ಗೊಬ್ಬರ ಚೀಲಗಳಲ್ಲಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳು ಕಂಡು ಬಂದವು. ಇವೆಲ್ಲಾ ಪಾಕೀಟುಗಳನ್ನು ಸಾಗಾಣಿಕೆ ಮಾಡಲು ಅಬಕಾರಿ ಅಧಿಕಾರಿಗಳು ಕಾಗದ ಪತ್ರಗಳನ್ನು ವಿಚಾರಿಸಲಾಗಿ ಅವರು ಇಲ್ಲವೆಂದು ತಿಳಿಸಿದರು. ಅವರು ಮೂರು (3) ಜನರ ಹೆಸರುಗಳನ್ನು ವಿಚಾರಿಸಲಾಗಿ ಅವರು ತಮ್ಮ ಹೆಸರುಗಳನ್ನು ಅಬಕಾರಿ ಅಧಿಕಾರಿಗಳಿಗೆ ತಿಳಿಸಿದರು. ಎಲ್ಲಾ ಮುದ್ದೇಮಾಲನ್ನು ವಾಹನ ಸಮೇತವಾಗಿ ಅಲ್ಲಿ ಕತ್ತಲು ಇದ್ದ ಕಾರಣ ಕಛೇರಿಗೆ ತಂದು ತಮ್ಮ ಸಮಕ್ಷಮದಲ್ಲಿ ತಪಾಸಿಸಲಾಗಿ ಪ್ರತಿಯೊಂದು ಗೊಬ್ಬರ ಚೀಲದಲ್ಲಿ 200 ಮಿಲಿಯ ಒಟ್ಟು 1600 ಸ್ಯಾಚೆಟ್‌ಗಳು ಇದ್ದವು. ಪ್ರತಿಯೊಂದು ಚೀಲದಿಂದ 200 ಮಿಲಿಯ ಎರಡು ಸ್ಯಾಚೆಟ್‌ಗಳಂತೆ ಒಟ್ಟು 16 ಸ್ಯಾಚೆಟ್‌ಗಳನ್ನು ರಸಾಯನಿಕ ಪರೀಕ್ಷೆಗೋಸ್ಕರ ಮಾದರಿಯಾಗಿ ತೆಗೆದು ಸದರಿ ಸ್ಯಾಚೆಟ್‌ಗಳಿಗೆ ನಮ್ಮ ಕಛೇರಿಯ ಶೀಲಿನಿಂದ ಶೀಲು ಮಾಡಿ ನಾವು ಹಾಗೂ ಪಂಚರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಲಾಯಿತು. ನಮ್ಮ ಸಮಕ್ಷಮ ಸವಿಸ್ತಾರವಾದ ಪಂಚನಾಮೆ ಬರೆದು ಮುಗಿಸಿದರು. ಈಗ ಆ ಪಂಚನಾಮೆಯ ಪ್ರತಿಯನ್ನು ನೋಡಿ ಅದನ್ನು ಈಗಾಗಲೇ ನಿಶಾನೆ ಪಿ-1 ಗುರುತಿಸಲಾಗಿದ್ದು, ಅದರ ಮೇಲಿರುವ ನನ್ನ ಸಹಿಯನ್ನು ನಿಶಾನೆ ಪಿ-1(ಬಿ) ಎಂದು ಗುರುತಿಸಲಾಯಿತು. ಮತ್ತು ಜಪ್ತು ಮಾಡಿದ ಅಂಬಾಸಿಡರ್ ಕಾರನ್ನು ನೋಡುತ್ತಿದ್ದು ಅದನ್ನು ಮುದ್ದೇಮಾಲು ನಂ.1 ಎಂದು ಈಗಾಗಲೇ ಗುರುತಿಸಲಾಗಿದೆ. ಹಾಗೂ ಜಪ್ತು ಮಾಡಿದ ಕಳ್ಳಭಟ್ಟಿ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಅಂಬಾಸಿಡರ್ ಕಾರ್ ನಂ.ಕೆಎ-28-ಎಂ-1389ನ್ನು ಮತ್ತು ಆರೋಪಿತರನ್ನು ಅಧಿಕಾರಿಗಳು ತಮ್ಮ ತಾಬಾಕ್ಕೆ ತೆಗೆದುಕೊಂಡಿರುವರು ಎಂದು ವಿವರವಾದ ಸಾಕ್ಷಿ ನುಡಿದಿರುವರು. ವಾಹನದ ಮಾಲಿಕರು ಹೇಳಿಕೆ ಸಮಯದಲ್ಲಿ ಗೈರು ಹಾಜರ್ ಇದ್ದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಪಂಚಸಾಕ್ಷಿದಾರನ ಸಾಕ್ಷಿಯು ಅಭಿಯೋಗದ ಪರ ಪುಷ್ಠಿ ನೀಡುತ್ತದೆ.

ಪ್ರಾ.ಸಾ.3 ತನ್ನ ಸಾಕ್ಷಿಯಲ್ಲಿ ತಾನು ಅಬಕಾರಿ ಉಪ ನಿರೀಕ್ಷಕ ಗ್ರಾಮೀಣ ಉಪವಲಯ ಬಿಜಾಪುರದಲ್ಲಿ 2001 ರಿಂದ 2005 ರವರೆಗೆ ಕಾರ್ಯನಿರ್ವಹಿಸಿರುತ್ತೇನೆ. ಬಿಜಾಪುರ ಉಪವಿಭಾಗ ಅಬಕಾರಿ ಉಪ ನಿರೀಕ್ಷಕರು ಶ್ರೀ ಎಸ್.ಜಿ. ಕುಲಕರ್ಣಿ ಇವರು ತಾವು ಜಪ್ತು ಮಾಡಿದ ವಾಹನ ಸಂಖ್ಯೆ: ಕೆಎ-28-ಎಂ-1389 ಹಾಗೂ ಜಪ್ತುಪಡಿಸಿದ 8 ಚೀಲಗಳಲ್ಲಿದ್ದ ಒಟ್ಟು 200 ಮಿಲಿಯ ಕಳ್ಳಭಟ್ಟಿ ಸಾರಾಯಿ ತುಂಬಿದ 1600 ಪಾಕೀಟುಗಳನ್ನು ಅದರೊಂದಿಗೆ ರಸಾಯನಿಕ ಮಾದರಿಗಾಗಿ ತೆಗೆದ 16 ರಸಾಯನಿಕ ಮಾದರಿಯ ಪಾಕೀಟುಗಳನ್ನು ಮತ್ತು ಸಂಬಂಧಿಸಿದ ಕಾಗದ ಪತ್ರಗಳೊಂದಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ. ನಾನು ನನ್ನ ಕಛೇರಿಯ ಅಬಕಾರಿ ರಕ್ಷಕರಾದ ಎಸ್.ಎಂ. ಹುದ್ದಾರ ಇವರೊಂದಿಗೆ ಒಟ್ಟು 16 ಕಳ್ಳಭಟ್ಟಿ ಸಾರಾಯಿ ತುಂಬಿದ ಮಾದರಿಯ ಪಾಕೀಟುಗಳನ್ನು ರಸಾಯನಿಕ ಪರೀಕ್ಷೆಗಾಗಿ ರಸಾಯನಿಕ ತಜ್ಞರಿಗೆ ಕಛೇರಿಯ ಮುಖ ಪತ್ರದೊಂದಿಗೆ ಬೆಂಗಳೂರಿಗೆ

ಕಳುಹಿಸಿಕೊಟ್ಟು, ರಸಾಯನಿಕ ತಜ್ಞರ ವರದಿಯನ್ನು ಪಡೆದಿರುತ್ತೇನೆ. ಈ ದಿವಸ ಈಗ ಅದರ ಪ್ರತಿಯನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಆರೋಪಿತರುಗಳ ಮೇಲೆ ದೋಷಾರೋಪಣಾ ಪತ್ರವನ್ನು ಬಿಜಾಪುರ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲಿಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಗೈರು ಹಾಜರಿ ಇದ್ದ ಕಾರಣ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಸಾಕ್ಷಿದಾರರ ಹೇಳಿಕೆಗಳನ್ನು ಮುಕ್ತಾಯಗೊಳಿಸಲಾಯಿತು ಎಂದು ತಿಳಿಸಿದರು. ಪ್ರಾಸಿಕ್ಯೂಷನ್ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದವನ್ನು ಮಂಡಿಸಿದರು. ಆ ಸಮಯದಲ್ಲಿ ವಾಹನ ಮಾಲಿಕರಾಗಲಿ ಅಥವಾ ಪರ ವಕೀಲರಾಗಲಿ ಗೈರು ಹಾಜರಿ ಇರುವುದರಿಂದ ಈ ಪ್ರಾಧಿಕಾರವು ವಾಹನ ಮಾಲಿಕರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾಸಿಕ್ಯೂಷನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ: 25.10.2004ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಪಾಕೀಟುಗಳು ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಪಾಕೀಟುಗಳು ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೆಯ ವಿವಾದಾಂಶ**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ ಸಕಾರಾತ್ಮಕ (ಹೌದು)**

ಪ್ರಾಸಿಕ್ಯೂಷನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರು ಹಾಗೂ ಇತರ ಸಾಕ್ಷಿದಾರರು ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಕಳ್ಳಭಟ್ಟಿ ಸಾರಾಯಿ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ. ಸದರಿ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲಾ.

**ಎರಡನೆಯ ವಿವಾದಾಂಶಕ್ಕೆ ಉತ್ತರ -ಇಲ್ಲಾ-**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನು ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತು ಆಗಿದ್ದು, ವಾಹನದ ಮಾಲಿಕನೇ ಸದರಿ ವಾಹನದ ಚಾಲಕನಾಗಿದ್ದು ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತು ಆಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲಿಕನು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ನೀಡಿರುವುದಿಲ್ಲಾ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲಿಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಪ್ರಾಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತುಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲಿಕರು ತಮ್ಮ ಹೇಳಿಕೆಯಿಂದಾಗಲಿ ಅಥವಾ ಸಾಕ್ಷ್ಯಾಧಾರಗಳಿಂದಾಗಲಿ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲಾ.

ಈ ಪ್ರಕರಣದಲ್ಲಿ ವಾಹನದ ಚಾಲಕನೇ ವಾಹನದ ಮಾಲಿಕ ಆಗಿರುವುದರಿಂದ ಈ ಕೃತ್ಯವು ತನ್ನ ತಿಳುವಳಿಕೆಯಿಂದಲೇ ನಡೆದಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

**ಮೂರನೇ ವಿವಾದಾಂಶಕ್ಕೆ ಉತ್ತರ -ಹೌದು-**

ಮೂರನೇ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ನಂತರ ನಿಯಮ 43(ಎ) 2 ರನ್ವಯ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ ಬಿಜಾಪುರ ಇವರ ಗುನ್ನೆ ನಂಬರ್: 06/ 2004-05 ರಲ್ಲಿ ಜಪ್ತು ಮಾಡಲ್ಪಟ್ಟ ವಾಹನ ನಂಬರ್: ಕೆಎ-28-ಎಂ-1389 (ಅಂಬಾಸಿಡರ್ ಕಾರ್) ಮತ್ತು 200 ಮಿಲಿಯ 1600 ಕಳ್ಳಭಟ್ಟಿ ಸಾರಾಯಿ ತುಂಬಿದ ಪಾಕೀಟುಗಳು ಒಟ್ಟು 320-000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು (ರಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಪ್ರಕರಣದಲ್ಲಿ ಜಪ್ತು ಮಾಡಿದ 200 ಮಿಲಿಯ 1600 ಕಳ್ಳಭಟ್ಟಿ ಸಾರಾಯಿ ತುಂಬಿದ ಪಾಕೀಟುಗಳು ಒಟ್ಟು 320-000 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು (ರಸಾಯನಿಕ ವಿಶ್ಲೇಷಣೆಗಾಗಿ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ) ಅಬಕಾರಿ ಉಪ ಅಧಿಕ್ಷಕರು ಬಿಜಾಪುರ ಉಪವಿಭಾಗ ಇವರ ಸಮ್ಮುಖದಲ್ಲಿ ಪಂಚನಾಮೆ ಕ್ರಮ ಜರುಗಿಸಿ ಕಳ್ಳಭಟ್ಟಿ ಸಾರಾಯಿಯನ್ನು ಪಾಕೀಟುಗಳೊಂದಿಗೆ ನಾಶಪಡಿಸಲು ಆದೇಶಿಸಿದ್ದೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 12.01.2006ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು,
ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ.1** - ಹಣಮಂತರಾವ ಗುಂಡುರಾವ ಕುಲಕರ್ಣಿ — ಫಿರ್ಯಾಧಿದಾರರು
ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ., ಬಿಜಾಪುರ ಜಿಲ್ಲೆ, ಬಿಜಾಪುರ.

**ಪ್ರಾ.ಸಾ.2** - ಮಲ್ಲಪ್ಪ ಭೀಮಪ್ಪ ಹಳ್ಳದಮನಿ — ತನಿಖಾಧಿಕಾರಿ
ಅಬಕಾರಿ ನಿರೀಕ್ಷಕರು ಜಾರಿ ಮತ್ತು ತನಿಖೆ, ಬಿಜಾಪುರ ಉಪವಿಭಾಗ, ಬಿಜಾಪುರ.

**ಪ್ರಾ.ಸಾ.3** - ಶಬ್ಬೀರ ಹುಸೇನಸಾಬ ದರ್ಗಾ — ಪಂಚರು
ವಯಸ್ಸು 40 ಉದ್ಯೋಗ- ಕೂಲಿ, ಸಾ: ಬಿಜಾಪುರ.

**ಅನುಬಂಧ- 2**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ ಪಿ-1 | ಪಂಚನಾಮ. |
| ನಿಶಾನೆ ಪಿ-1(ಎ) | ಪ್ರಾ.ಸಾ. -1 ರವರ ಸಹಿ. |
| ನಿಶಾನೆ ಪಿ-1 (ಬಿ) | ಪಂಚರ ಸಹಿ. |
| ನಿಶಾನೆ ಪಿ-2 | ಪ್ರಥಮ ವರ್ತಮಾನ ವರದಿ. |
| ನಿಶಾನೆ ಪಿ-2(ಎ) | ಪ್ರಾ.ಸಾ. 1 ರವರ ಸಹಿ. |
| ನಿಶಾನೆ ಪಿ-3 | ಸರ್ಚಮೆಮೂದ ದೃಢೀಕರಣ ಪತ್ರ. |
| ನಿಶಾನೆ ಪಿ-3(1) | ಪ್ರಾ.ಸಾ.1ರವರ ಸಹಿ. |
| ನಿಶಾನೆ ಪಿ-4 | ರಸಾಯನಿಕ ತಜ್ಞರ ವರದಿಯ ಪ್ರತಿ. |

**ಅನುಬಂಧ- 3**

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

3) ಎಂ.ಓ.1 ವಾಹನ ನಂಬರ್ ಕೆಎ-28-ಎಂ-1389

4) ಎಂ.ಓ. -2 ಮಾದರಿ ಕಳ್ಳಭಟ್ಟಿ ಸಾರಾಯಿಯ ಪಾಕೀಟಗಳು

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು

-ಇಲ್ಲಾ-

**ಅನುಬಂಧ-5**

ವಾಹನದ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು

-ಇಲ್ಲಾ-

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು,
ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

ಪಿಆರ್. 248

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು**

**ಗುನ್ಹೆ ನಂ.06/2004-05, ದಿನಾಂಕ:11ನೇ ಸೆಪ್ಟೆಂಬರ್, 2005**

**ಅಬಕಾರಿ ಉಪ ನಿರೀಕ್ಷಕರು-1, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ**

**ನಂ. ಇಎಕ್ಸ್‌ಇ: ಬಿಜೆಪಿ: ಇ.ಐ.ಬಿ.: ಡಿಟಿಸಿಆರ್:53/ 2005-06, ದಿನಾಂಕ:6ನೇ ಜನವರಿ, 2006**

**ಉಪಸ್ಥಿತರು:** ಕೆ.ಆರ್. ಗೌಡ್ರ
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

| **ಫಿರ್ಯಾಧಿದಾರರು** | | **ಆರೋಪಿತರು** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ. | ವಿರುದ್ಧ | 1. ನಿಂಗಪ್ಪ ತಂದೆ ಶರಣಪ್ಪ ಮಸಳಿ ಸಾ: ನಾಗಾಠಾಣ.<br>2. ಶ್ರೀ ಶೈಲ ತಂದೆ ಶರಣಪ್ಪ ಮಸಳಿ ಸಾ: ನಾಗಾಠಾಣ.<br>3. (ವಾಹನ ಚಾಲಕ ಮತ್ತು ವಾಹನದ ಮಾಲಿಕರು)<br>4. ನಾಗಪ್ಪ ತಂದೆ ತಿಪ್ಪಣ್ಣಾ ಕನ್ನೂಳ್ಳಿ ಸಾ: ನಾಗಾಠಾಣ. |

**ಪ್ರಕರಣದ ಹಿನ್ನೆಲೆ:**

ದಿನಾಂಕ: 10.09.2005 ರಂದು ರಾತ್ರಿ 10.00 ಗಂಟೆಗೆ ಬಿಜಾಪುರ ಶಹರದಿಂದ ಇಂಡಿಗೆ ಹೋಗುವ ರಸ್ತೆಯಲ್ಲಿರುವ ರೈಲ್ವೇಗೇಟ್ ಹತ್ತಿರ ಅಬಕಾರಿ ಉಪ ನಿರೀಕ್ಷಕರು-1 ಇ.ಐ.ಬಿ., ಬಿಜಾಪುರ ಜಿಲ್ಲೆ, ಇವರು ಹಾಗೂ ಸಿಬ್ಬಂದಿ ಜನರು ಮತ್ತು ಪಂಚರೊಂದಿಗೆ ರಸ್ತೆಯ ಮೇಲೆ ಹಾಯ್ದು ಹೋಗುವ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ಬೆಳಗಿನ ಜಾವ 4.00 ಗಂಟೆಗೆ ಬಿಜಾಪುರ ಶಹರದಿಂದ ಇಂಡಿಗೆ ಹೊರಟಿದ್ದ ವಾಹನವನ್ನು ತಡೆದು ನಿಲ್ಲಿಸಲಾಗಿ ವಾಹನದಲ್ಲಿ ಒಬ್ಬ ಡ್ರೈವರ್ ಹಾಗೂ ಇನ್ನಿಬ್ಬರು ವ್ಯಕ್ತಿಗಳು ಇದ್ದರು, ಸದರಿ ವಾಹನವನ್ನು ತಪಾಸಣೆ ಮಾಡಲಾಗಿ ಅದರಲ್ಲಿ ಬಾಕ್ಸ್‌ಗಳಿರುವುದು ಕಂಡು ಅಬಕಾರಿ ಸಿಬ್ಬಂದಿ ಜನರು ಸದರಿ ರಟ್ಟಿನ ಬಾಕ್ಸ್‌ಗಳನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವಿಸ್ಕಿ ಹಾಗೂ ಓಲ್ಡ್‌ಮಾಂಕ್ ರಮ್‌ದ ಬಾಟಲಿಗಳು ಇರುವುದು ಕಂಡು ಸದರಿ ವಾಹನದಲ್ಲಿದ್ದ ವಾಹನದ ಚಾಲಕನನ್ನು ವಿಚಾರಿಸಲಾಗಿ ಅವನು ತನ್ನ ಹೆಸರು ಶ್ರೀಶೈಲ್ ತಂದೆ ಶರಣಪ್ಪ ಮಸಳಿ ಸಾ: ನಾಗಠಾಣ ಎಂದು ಹೇಳಿದನು. ಸದರಿ ವಾಹನದಲ್ಲಿ ಇನ್ನೂ ಎರಡು ಜನರ ಹೆಸರು ವಿಚಾರಿಸಲಾಗಿ ಒಬ್ಬನ ಹೆಸರು ನಿಂಗಪ್ಪ ತಂದೆ ಶರಣಪ್ಪ ಮಸಳಿ ಸಾ: ನಾಗಠಾಣ ಮತ್ತೊಬ್ಬನ ಹೆಸರು ನಾಗಪ್ಪ ತಂದೆ ತಿಪ್ಪಣ್ಣ ಕನ್ನೂಳ್ಳಿ ಸಾ: ನಾಗಠಾಣ ಎಂದು ತಿಳಿಸಿರುತ್ತಾರೆ. ನಂತರ ಅಬಕಾರಿ ಅಧಿಕಾರಿಗಳು ಸದರಿ ವಾಹನವನ್ನು ಶೋಧಿಸಲಾಗಿ ವಾಹನದಲ್ಲಿ ಮದ್ಯದ ಬಾಟಲಿಗಳಿರುವ ಪೆಟ್ಟಿಗೆಗಳು ಇರುವುದು ಕಂಡು ಸದರಿ ವಾಹನವನ್ನು ಪರಿಶೀಲಿಸಲಾಗಿ ಅದು ಟೆಂಪೋ ಟ್ರ್ಯಾಕ್ಸ್ ನೊಂದಣಿ ಸಂಖ್ಯೆ: ಕೆಎ-28-ಎಂ-3243 ಇದ್ದು ಇದರ ಚಾಸ್ಸಿ ನಂ. ಟಿ-57008442 ಕೆಎ-02 ಮತ್ತು ಮದ್ಯದ ಪೆಟ್ಟಿಗೆಗಳನ್ನು ಪರಿಶೀಲಿಸಿ ಎಣಿಕೆ ಮಾಡಲಾಗಿ ಅದರ ವಿವರ ಈ ಕೆಳಕಂಡಂತೆ ಇರುತ್ತದೆ.

1. ಓರಿಜಿನಲ್ ಚಾಯಿಸ್ ವಿಸ್ಕಿ. 180 ಎಂಎಲ್‌ನ 1392 ಬಾಟಲ್‌ಗಳು, 29 ಪೆಟ್ಟಿಗೆಗಳು.
2. ಓಲ್ಡ್ ಮಂಕ್ ರಮ್ 180 ಎಂಎಲ್‌ನ 336 ಬಾಟಲ್‌ಗಳು 07 ಪೆಟ್ಟಿಗೆಗಳು.

ಒಟ್ಟು 311-040 ಲೀಟರ್ ಕರಕೂಡದ ನಕಲಿ ಮದ್ಯ ಇರುವುದೆಂದು ಭಾವಿಸಿ ವಾಹನದ ಚಾಲಕನಿಗೆ ಸದರಿ ಮದ್ಯದ ಬಗ್ಗೆ ಸಾಗಾಣಿಕೆ ಮಾಡಲು ಪರ್ಮಿಟ್ ಲೈಸನ್ಸ್ ಇದೆಯೇ ಎಂದು ಕೇಳಿದಾಗ ಅವನು ಆಗ ಯಾವುದೇ ಕಾಗದ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲ ಮತ್ತು ಸಮರ್ಪಕವಾಗಿ ಉತ್ತರ ನೀಡಿರುವುದಿಲ್ಲವೆಂದು ಅಬಕಾರಿ ಅಧಿಕಾರಿಗಳು ತಿಳಿಸಿರುತ್ತಾರೆ. ಈ ಮೇಲೆ ತಿಳಿಸಿರುವ 1 ರಿಂದ 2 ಬ್ರ್ಯಾಂಡಿನ ಪೆಟ್ಟಿಗೆಗಳಿಂದ ತಲಾ ಒಂದರಂತೆ ಒಟ್ಟು 36 ಬಾಟಲ್‌ಗಳನ್ನು ರಸಾಯನ ಮಾದರಿಗಾಗಿ ತೆಗೆದು ಸೀಲ್ ಮಾಡಿ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಿರುತ್ತಾರೆ. ಮತ್ತು ವಾಹನದಲ್ಲಿರುವ ಎಲ್ಲ ಮದ್ಯದ ಬಾಟಲ್‌ಗಳನ್ನು ಮತ್ತು ವಾಹನ ಸಂಖ್ಯೆ: ಕೆಎ-28-ಎಂ-3243ನ್ನು ಜಪ್ತು ಮಾಡಿ ಆರೋಪಿಗಳನ್ನು ದಸ್ತಗಿರಿ ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡಿರುತ್ತಾರೆ. ಇದರ ಬಗ್ಗೆ ಪಂಚನಾಮೆಯನ್ನು ಪಂಚರ ಸಮಕ್ಷಮ ಬರೆದು ಪಿರ್ಯಾಧಿಯೊಂದಿಗೆ ಆರೋಪಿತರನ್ನು ನ್ಯಾಯಾಲಯ ವಶಕ್ಕೆ ಒಪ್ಪಿಸಿರುತ್ತಾರೆ. ನಂತರ ಸದರಿ ಪ್ರಕರಣ ಮುಂದಿನ ತನಿಖೆಗೋಸ್ಕರ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪುರ ತಾಲ್ಲೂಕು ಇವರಿಗೆ ಮುದ್ದೇಮಾಲಿನೊಂದಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಥಮ ವರ್ತಮಾನ ವರದಿ ಮತ್ತು ಪಂಚನಾಮೆ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಮತ್ತು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪುರ ಇವರು ರಸಾಯನಿಕ ಮಾದರಿಗಳನ್ನು ರಸಾಯನಿಕ ತಜ್ಞರಿಗೆ ಪರೀಕ್ಷೆಗೋಸ್ಕರ ಕಳುಹಿಸಿ, ರಸಾಯನಿಕ ತಜ್ಞರ ವರದಿಯನ್ನು ಪಡೆದಿರುತ್ತಾರೆ. ಸದರಿ ರಸಾಯನ ತಜ್ಞರ ವರದಿ ಸಂಖ್ಯೆ: ಸಿಸಿಎಲ್ 5880/ 2005ರಲ್ಲಿ ಜಪ್ತು ಮಾಡಿದ ಮದ್ಯದಲ್ಲಿ ಮದ್ಯಸಾರದ ಅಂಶ ಇದ್ದು ಸದರಿ ಮದ್ಯವು ನಕಲಿ ಮದ್ಯ ಇರುತ್ತದೆ ಎಂದು ದೃಢಪಡಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪುರ ಇವರಿಗೆ ಸದರಿ ವಾಹನದ ಮಾಲಿಕರ ಹೆಸರು ಮತ್ತು ವಿಳಾಸ ಕುರಿತು ಬಿ-ಎಕ್ಸಟ್ರ್ಯಾಕ್ಟ್ ಕಳುಹಿಸಲು ಪತ್ರ ಬರೆದು, ಸದರಿ ಸಾರಿಗೆ ಅಧಿಕಾರಿಗಳಿಂದ ಬಿ-ಎಕ್ಸಟ್ರ್ಯಾಕ್ಟ್ ಪಡೆದುಕೊಂಡಿದ್ದು, ಸದರಿ ವರದಿಯಲ್ಲಿ ವಾಹನ ಸಂಖ್ಯೆ: ಕೆಎ-28-ಎಂ-3243 ಟೆಂಪೊ ಟ್ರ್ಯಾಕ್ಸ್ ಇದ್ದು, ಸದರಿ ವಾಹನ ಮಾಲೀಕರ ಹೆಸರು ಶ್ರೀಶೈಲ ತಂದೆ ಶರಣಪ್ಪ ಮಸಳಿ ಸಾ: ನಾಗಠಾಣ ತಾ: ಬಿಜಾಪುರ ಎಂದು ದೃಢಪಡಿಸಿರುತ್ತಾರೆ.

ಶ್ರೀಶೈಲ್ ತಂದೆ ಶರಣಪ್ಪ ಇವರು ದಿನಾಂಕ: 03.10.2005ರಂದು ಟೆಂಪೊ ಟ್ರ್ಯಾಕ್ಸ್ ಸಂಖ್ಯೆ: ಕೆಎ-28-ಎಂ-3243 ವಾಹನವನ್ನು ಈಗಾಗಲೇ ನಾನು ಬೇರೆಯವರಿಗೆ ಮಾರಾಟ ಮಾಡಿರುತ್ತೇನೆ. ಮತ್ತು ಸದರಿ ವಾಹನಕ್ಕೂ ನನಗೆ ಯಾವುದೇ ಸಂಬಂಧವಿರುವುದಿಲ್ಲ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡರು ಸಹ ಯಾವುದೇ ನನ್ನದು ಯಾವುದೇ ತಕರಾರು ಇರುವುದಿಲ್ಲ ಎಂದು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪುರ ಇವರ ಮುಂದೆ ಹೇಳಿಕೆ ನೀಡಿರುತ್ತಾನೆ. ಸದರಿ ಹೇಳಿಕೆ ಪತ್ರವನ್ನು ಅಬಕಾರಿ ಉಪ ನಿರೀಕ್ಷಕರು ಈ ಪ್ರಾಧಿಕಾರಕ್ಕೆ ಹಾಜರು ಪಡಿಸಿರುತ್ತಾರೆ.

ಸದರಿ ಟೆಂಪೊ ಟ್ರ್ಯಾಕ್ಸ್ ಸಂಖ್ಯೆ: ಕೆಎ-28-ಎಂ-3243 ನ್ನು ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಜಪ್ತು ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ನಿಯಮಗಳ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ. ಆದ್ದರಿಂದ ಈ ಪ್ರಕ್ರಿಯೆ ಮಾಡುವ ಮುನ್ನ ಈ ಪ್ರಾಧಿಕಾರವು ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ದಿನಾಂಕ: 14.11.2005ರಂದು ವಾಹನ ಮಾಲೀಕರಿಗೆ ಕಾರಣ ಕೇಳುವ ನೋಟಿಸು ಹೊರಡಿಸಲಾಯಿತು. ಆದರೆ ವಾಹನ ಮಾಲೀಕರು ಸದರಿ ಕಾರಣ ಕೇಳುವ ನೋಟಿಸಿಗೆ ಯಾವುದೇ ರೀತಿಯ ಲಿಖಿತ ಉತ್ತರ ಸಲ್ಲಿಸಿರುತವುದಿಲ್ಲಾ. ತದನಂತರ ಈ ಪ್ರಾಧಿಕಾರವು ಸದರಿ ವಾಹನದ ಪ್ರಕರಣವನ್ನು ವಿಚಾರಣೆ ಕುರಿತು ದಿನಾಂಕ: 04.01.2006ರಂದು ದಿನಾಂಕ ನಿಗದಿಪಡಿಸಿ ವಾಹನ ಮಾಲಿಕರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ ನೋಟೀಸ್ ನೀಡಿ ಪ್ರಕರಣವನ್ನು ವಿಚಾರಣೆ ನಡೆಸಲಾಯಿತು.

ಪ್ರಾಸಿಕ್ಯೂಷನ್ ಪರವಾಗಿ ಮೂರು (3) ಸಾಕ್ಷಿದಾರರ ಸಾಕ್ಷ್ಯವನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ, ನಿಶಾನೆ ಪಿ-1 ರಿಂದ ನಿಶಾನೆ ಪಿ-3 ಎಂದು ಮತ್ತು ಮುದ್ದೇಮಾಲನ್ನು 1 ಹಾಗೂ 2 ಎಂದು ಗುರುತಿಸಿಕೊಳ್ಳಲಾಯಿತು. ವಾಹನ ಮಾಲಿಕರು ಹಾಜರು ಇದ್ದು ಯಾವುದೇ ಸಾಕ್ಷಿ ನುಡಿದಿರುವುದಿಲ್ಲ.

ಪ್ರಾಸಿಕ್ಯೂಷನ್ ಪರ ಸಾಕ್ಷಿ ನುಡಿದ ಪಿರ್ಯಾಧಿದಾರರು ಪ್ರಾ.ಸಾ. -1 ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ: 28.05.2005 ರಿಂದ ಅಬಕಾರಿ ಉಪ ನಿರೀಕ್ಷಕರೆಂದು ಬಿಜಾಪುರ ಇ.ಐ.ಬಿ. ಯಲ್ಲಿ ಕಾರ್ಯನಿರ್ವಹಿಸುತ್ತಿದ್ದೇನೆ. ದಿನಾಂಕ: 10.09.2005ರಂದು ರಾತ್ರಿ 10.00 ಗಂಟೆಗೆ ಅಬಕಾರಿ ಸಿಬ್ಬಂದಿಯೊಂದಿಗೆ ತಾನು ಕಛೇರಿಯಲ್ಲಿ ಇದ್ದಾಗ ಖಚಿತವಾದ ಭಾತ್ಮಿ ಬಂದು ಬಿಜಾಪುರದಿಂದ ಇಂಡಿಗೆ ನಕಲಿ ಮದ್ಯದ ಬಾಟಲಿಗಳಿದ್ದ ಪೆಟ್ಟಿಗೆಗಳನ್ನು ವಾಹನದಲ್ಲಿ ಸಾಗಾಣಿಕೆ ಮಾಡುತ್ತಾರೆಂದು ಎಂದು ದೊರೆತ ಮಾಹಿತಿಯ ಮೇರೆಗೆ, ಪಂಚ ಜನರನ್ನು ಕರೆಯಿಸಿ ವಿಷಯವನ್ನು ತಿಳಿಸಿ ಪಂಚ ಜನರನ್ನು ಹಾಗೂ ಸಿಬ್ಬಂದಿಯವರನ್ನು ಸರ್ಕಾರಿ ವಾಹನದಲ್ಲಿ ಬಿಜಾಪುರದಿಂದ ಇಂಡಿಗೆ ಹೋಗುವ ರಸ್ತೆಯಲ್ಲಿ ರೈಲ್ವೆ ಗೇಟ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ಇದ್ದೆವು. ಬೆಳಗಿನ 4.00 ಗಂಟೆ ಸುಮಾರಿಗೆ ಬಿಜಾಪುರದ ಕಡೆಯಿಂದ ಒಂದು ಟೆಂಪೊ ಟ್ರ್ಯಾಕ್ಸ್ ಬರುವುದನ್ನು ಕಂಡು ನಾವು ಅದನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಿದೆವು ಸದರಿ ವಾಹನದ ಒಳಗಡೆ ಮದ್ಯದ ಬಾಟಲಿಗಳು ತುಂಬಿದ್ದ ರಟ್ಟಿನ ಪೆಟ್ಟಿಗೆಗಳು ಇದ್ದವು. ಮತ್ತು ವಾಹನದಲ್ಲಿ ಮೂರು (3) ಜನರು ಇದ್ದರು. ಸದರಿ ವಾಹನದಲ್ಲಿದ್ದ ವಾಹನದ ಚಾಲಕನನ್ನು ವಿಚಾರಿಸಲಾಗಿ ಅವನು ತನ್ನ ಹೆಸರು ಶ್ರೀಶೈಲ್ ತಂದೆ

ಶರಣಪ್ಪ ಮಸಳಿ ಸಾ: ನಾಗಠಾಣ ಎಂದು ಹೇಳಿದನು. ಸದರಿ ವಾಹನದಲ್ಲಿ ಇನ್ನೂ ಎರಡು ಜನರ ಹೆಸರು ವಿಚಾರಿಸಲಾಗಿ ಒಬ್ಬನ ಹೆಸರು ನಿಂಗಪ್ಪ ತಂದೆ ಶರಣಪ್ಪ ಮಸಳಿ ಸಾ: ನಾಗಠಾಣ ಮತ್ತೊಬ್ಬನ ಹೆಸರು ನಾಗಪ್ಪ ತಂದೆ ತಿಪ್ಪಣ್ಣ ಕೆನ್ನೂಳ್ಳಿ ಸಾ: ನಾಗಠಾಣ ಎಂದು ತಿಳಿಸಿದರು. ಸದರಿ ಮದ್ಯದ ಬಗ್ಗೆ ಸಾಗಾಣಿಕೆ ಮಾಡಲು ಪರ್ಮಿಟ ಲೈಸೆನ್ಸ್ ಇದೆಯೇ ಎಂದು ಕೇಳಿದಾಗ ಅವನು ಆಗ ಯಾವುದೇ ಕಾಗದ ಪತ್ರಗಳನ್ನು ಹಾಜರು ಪಡಿಸಿರುವುದಿಲ್ಲ ಮತ್ತು ಸಮರ್ಪಕವಾಗಿ ಉತ್ತರ ನೀಡಿರುವುದಿಲ್ಲ ಎಂದು ಹೇಳಿಕೆ ನೀಡಿರುವರು. ನಂತರ ಸದರಿ ವಾಹನದ ಒಳಗಡೆ ಇದ್ದ ರಟ್ಟಿನ ಪೆಟ್ಟಿಗೆಗಳನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವಿಸ್ಕಿ ಹಾಗೂ ಓಲ್ಡ್‌ಮಂಕ್ ರಮ್‌ನ ಮದ್ಯದ ಬಾಟಲಿಗಳು ಇದ್ದವು. ಪಂಚರ ಸಮಕ್ಷಮ ಸದರಿ ಬಾಟಲಿಗಳನ್ನು ಪರಿಶೀಲಿಸಲಾಗಿ ಈ ಕೆಳಕಂಡಂತೆ ಇದ್ದವು.

1. ಓರಿಜಿನಲ್ ಚಾಯಿಸ್ ವಿಸ್ಕಿ. 180 ಎಂಎಲ್‌ನ 1392 ಬಾಟಲ್‌ಗಳು.

2. ಓಲ್ಡ್ ಮಂಕ್ ರಮ್ 180 ಎಂಎಲ್‌ನ 336 ಬಾಟಲ್‌ಗಳು.

ಹೀಗೆ ಒಟ್ಟು 311-040 ಲೀಟರ್ ಕರಕೂಡದ ನಕಲಿ ಮದ್ಯ ಇರುವುದು ಪತ್ತೆ ಆಯಿತು. ನಂತರ ಪಂಚರ ಸಮಕ್ಷಮ ಸದರಿ ಮದ್ಯದ ಬಾಟಲಿಗಳನ್ನು 35 ಪೆಟ್ಟಿಗೆಗಳಲ್ಲಿ ಶೇಖರಿಸಿದ್ದು ಪ್ರತಿಯೊಂದು ಪೆಟ್ಟಿಗೆಯಲ್ಲಿಯ 180 ಮಿಲಿಯ ಒಂದು ಬಾಟಲಿಯಂತೆ ಇಟ್ಟು 36 ಬಾಟಲ್‌ಗಳನ್ನು ರಸಾಯನ ಪರೀಕ್ಷೆಗೋಸ್ಕರ ಮಾದರಿಯಾಗಿ ತೆಗೆದು ಸದರಿ ಬಾಟಲಿಗಳಿಗೆ ನಮ್ಮ ಕಛೇರಿಯ ಸೀಲಿನಿಂದ ಸೀಲು ಮಾಡಿ ನಾವು ಹಾಗೂ ಪಂಚರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಲಾಯಿತು. ಮತ್ತು ವಾಹನವನ್ನು ತಪಾಶೀಲಿಸಲಾಗಿ ವಾಹನವು ಟೆಂಪೋ ಟ್ರ್ಯಾಕ್ಸ್ ಸಂಖ್ಯೆ: ಕೆಎ-28-ಎಂ-3243ನ್ನು ಪಂಚನಾಮೆ ಅಡಿಯಲ್ಲಿ ಹಾಗೂ ಎಲ್ಲ ಮದ್ಯದ ಪೆಟ್ಟಿಗೆಗಳನ್ನು ಜಪ್ತು ಮಾಡಲಾಯಿತು. ಸ್ಥಳದಲ್ಲಿಯೇ ಪಂಚರ ಸಮಕ್ಷಮ ಸವಿಸ್ತಾರವಾದ ಪಂಚನಾಮೆ ಬರೆದು ಮುಗಿಸಲಾಯಿತು. ನಂತರ ಆರೋಪಿಗಳನ್ನು ಬಂಧಿಸಿ ತಮ್ಮ ತಾಬಾಕ್ಕೆ ತೆಗೆದುಕೊಳ್ಳಲಾಯಿತು. ಈಗ ಪಂಚನಾಮೆಯ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಮತ್ತು ಅವರ ಸಹಿಯನ್ನು ನಿಶಾನೆ ಪಿ-1(ಎ) ಎಂದು ಗುರುತಿಸಲಾಯಿತು. ಮತ್ತು ಜಪ್ತು ಮಾಡಿದ ಟೆಂಪೊ ಟ್ರ್ಯಾಕ್ಸ್ ವಾಹನವನ್ನು ನೋಡುತ್ತಿದ್ದು ಅದನ್ನು ಮುದ್ದೇಮಾಲು ನಂ.1 ಎಂದು ಗುರುತಿಸಲಾಯಿತು. ಹಾಗೂ ಜಪ್ತು ಮಾಡಿದ ಮದ್ಯದ ಬಾಟಲ್‌ಗಳನ್ನು ಹಾಗೂ ಮಾದರಿ ಬಾಟಲ್‌ಗಳನ್ನು ಈಗ ನೋಡುತ್ತಿದ್ದು ಅವುಗಳಿಗೆ ಮುದ್ದೇಮಾಲು ನಂ.2 ಎಂದು ಗುರುತಿಸಲಾಯಿತು. ನಂತರ ಕಛೇರಿಗೆ ಬಂದು ಗುನ್ಹೆ ದಾಖಲಿಸಿ, ಗುನ್ಹೆ ನಂ.06/ 2005-06 ದಿನಾಂಕ: 11.09.2005ರಂದು ಮಾನ್ಯ ನ್ಯಾಯಾಲಯಕ್ಕೆ ಪ್ರಥಮ ವರ್ತಮಾನ ವರದಿ ಹಾಗೂ ಪಂಚನಾಮೆ ಮತ್ತು ಬಂಧಿಸಿದ ಮೂರು (3) ಆರೋಪಿತರನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಲಾಯಿತು. ಈಗ ಪ್ರಥಮ ವರ್ತಮಾನ ವರದಿಯ ಪ್ರತಿಯನ್ನು ನೋಡುತ್ತಿದ್ದು ಅದನ್ನು ಈಗ ನಿಶಾನೆ ಪಿ-2 ಮತ್ತು ಅದರ ಮೇಲಿರುವ ತಮ್ಮ ಸಹಿ ಗುರುತಿಸಿ ಅದನ್ನು ನಿಶಾನೆ ಪಿ-2(ಎ) ಎಂದು ಗುರುತಿಸಲಾಯಿತು. ಮುಂದಿನ ತನಿಖೆಗೋಸ್ಕರ ವಾಹನ ಮತ್ತು ಮುದ್ದೇಮಾಲು ಹಾಗೂ ರಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಗಳನ್ನು ಮತ್ತು ಎಲ್ಲಾ ಸಂಬಂಧಿಸಿದ ಕಾಗದ ಪತ್ರಗಳನ್ನು ಅಬಕಾರಿ ಉಪ ನಿರೀಕ್ಷಕರು ಜಾ ಮತ್ತು ತ ಬಿಜಾಪುರ ತಾಲ್ಲೂಕು ಬಿಜಾಪುರ ಇವರಿಗೆ ಹಸ್ತಾಂತರ ಮಾಡಿರುತ್ತೇನೆ ಎಂದು ವಿವರವಾದ ಸಾಕ್ಷಿ ನುಡಿದಿರುವರು. ವಾಹನದ ಮಾಲೀಕರು ಹೇಳಿಕೆ ಸಮಯದಲ್ಲಿ ಹಾಜರು ಇದ್ದರು ಪಾಟೀ ಸವಾಲು ಮಾಡಿರುವುದಿಲ್ಲ.

ಪ್ರಾ.ಸಾ.2 ತನ್ನ ಸಾಕ್ಷಿಯಲ್ಲಿ ತಾನು ದಿನಾಂಕ: 25.05.2005 ರಿಂದ ಅಬಕಾರಿ ಉಪ ನಿರೀಕ್ಷಕ ಜಾರಿ ಮತ್ತು ತನಿಖೆ ಕಛೇರಿ ಬಿಜಾಪುರ ತಾಲ್ಲೂಕು ಬಿಜಾಪುರದಲ್ಲಿ ಕಾರ್ಯನಿರ್ವಹಿಸುತ್ತಿದ್ದೇನೆ. ದಿನಾಂಕ: 28.09.2005ರಂದು ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಇವರಿಂದ ಟೆಂಪೋ ಟ್ರ್ಯಾಕ್ಸ್ ಸಂಖ್ಯೆ: ಕೆಎ-28-ಎಂ-3243ನ್ನು ಹಾಗೂ ರಸಾಯನ ಪರೀಕ್ಷೆಗೆ ತೆಗೆದ 180 ಎಂಎಲ್‌ದ 36 ಬಾಟಲ್‌ಗಳನ್ನು ಜಪ್ತು ಮಾಡಿದ ಮದ್ಯದ ಪೆಟ್ಟಿಗೆಗಳನ್ನು ಹಾಗೂ ಸಂಬಂಧಿಸಿದ ಕಾಗದ ಪತ್ರಗಳನ್ನು ತಮಗೆ ಹಸ್ತಾಂತರಿಸಿರುತ್ತಾರೆ. ರಸಾಯನಿಕ ಪರೀಕ್ಷೆಗಾಗಿ ತೆಗೆದ ರಸಾಯನಿಕ ಮಾದರಿಗಳನ್ನು ತನ್ನ ಕಛೇರಿಯ ಪತ್ರದೊಂದಿಗೆ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಎಸ್.ಸಿ. ರಾಯಚೂರ ಇವರೊಂದಿಗೆ ದಿನಾಂಕ: 19.10.2005ರಂದು ಬೆಂಗಳೂರಿಗೆ ಕಳುಹಿಸಿಕೊಟ್ಟೆನು. ರಸಾಯನಿಕ ತಜ್ಞರಿಂದ ರಸಾಯನಿಕ ವರದಿಯನ್ನು ಪಡೆದಿರುತ್ತಾರೆ. ಆ ವರದಿಯನ್ನು ಈ ದಿವಸ ನೋಡುತ್ತಿದ್ದು, ಅದನ್ನು ನಿಶಾನೆ-ಪಿ-3 ಎಂದು ಗುರುತಿಸಿಕೊಳ್ಳಲಾಯಿತು. ಸದರಿ ವಾಹನದ ಮಾಲಿಕರು ಯಾರೆಂಬುದು ತಿಳಿದುಕೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿ ಬಿಜಾಪುರ ಇವರಿಗೆ ಪತ್ರ ಬರೆದು “ಬಿ” ಎಕ್ಸ್‌ಟ್ರ್ಯಾಕ್ಟ್ ಪಡೆದುಕೊಂಡಿರುತ್ತಾರೆ. ಸದರಿ ಜಪ್ತು ಮಾಡಿದ ವಾಹನದ ಮಾಲಿಕ ಶ್ರೀಶೈಲ್ ತಂದೆ ಶರಣಪ್ಪ ಮಸಳಿ ಸಾ: ನಾಗಾಠಾಣ ಎಂದು ಇರುತ್ತದೆ. ಸದರಿ “ಬಿ” ಎಕ್ಸಟ್ರ್ಯಾಕ್ಟನ್ನು ಹಾಜರುಪಡಿಸಿರುತ್ತೇನೆ. ಆರೋಪಿತರ ಮೇಲೆ ದೋಷಾರೋಪಣಾ ಪತ್ರವನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನಂತರ ಸಲ್ಲಿಸಲಾಗುವುದು. ತನಿಖೆಯನ್ನು ಮುಂದುವರಿಸಿ ದಿನಾಂಕ: 03.10.2005ರಂದು ಸದರಿ ವಾಹನದ ಮಾಲಿಕರಾದ ಶ್ರೀಶೈಲ ತಂದೆ ಶರಣಪ್ಪ ಮಸಳಿ ಇವರನ್ನು ವಿಚಾರಿಸಲಾಗಿ ತನ್ನ ವಾಹನ ಸಂಖ್ಯೆ: ಕೆಎ-28-ಎಂ-3243ನ್ನು ಬೇರೆಯವರಿಗೆ ಮಾರಾಟ ಮಾಡಿರುತ್ತೇನೆ. ಜಪ್ತು ಮಾಡಿದ ವಾಹನಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡರು ತನ್ನದು ಯಾವುದೇ ತಕರಾರು ಇರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾನೆ. ಮತ್ತು ಸದರಿ ಹೇಳಿಕೆ ಪತ್ರವನ್ನು ದಿನಾಂಕ: 06.11.2005ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲಿಕರಾದ ಶ್ರೀಶೈಲ ತಂದೆ ಶರಣಪ್ಪ ಮಸಳಿ ಸಾ: ನಾಗಾಠಾಣ ಆ ಸಮಯದಲ್ಲಿ ಪ್ರಾಧಿಕಾರದ ಮುಂದೆ ಹಾಜರಿದ್ದರೂ ಯಾವುದೇ ಪ್ರಶ್ನೆಗಳನ್ನು ಕೇಳಿಲ್ಲ ಹಾಗೂ ಪಾಟೀ ಸವಾಲು ಮಾಡಲಿಲ್ಲ.

ಪ್ರಾ.ಸಾ. -3 ತನಗೆ ದಿನಾಂಕ: 10.09.2005ರಂದು ರಾತ್ರಿ 10.00 ಗಂಟೆಗೆ ಅಬಕಾರಿ ಅಧಿಕಾರಿಗಳು ತನ್ನನ್ನು ಕರೆಯಿಸಿ ಬಿಜಾಪುರದಿಂದ ಇಂಡಿ ಕಡೆಗೆ ನಕಲಿ ಮದ್ಯದ ಪೆಟ್ಟಿಗೆಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಾರೆಂದು ಭಾತ್ಮಿ ಬಂದಿರುವುದರಿಂದ ತಮಗೆ ಪಂಚರಾಗಿ ಕಾರ್ಯ ನಿರ್ವಹಿಸಲು ಕೇಳಿಕೊಂಡಿದ್ದರಿಂದ ಅದಕ್ಕೆ ಒಪ್ಪಿಕೊಂಡು ಅಬಕಾರಿ ಅಧಿಕಾರಿಗಳೊಂದಿಗೆ ರಸ್ತೆ ಕಾವಲು ಮಾಡಲು ಹೋಗಿ ಬಿಜಾಪುರದಿಂದ ಇಂಡಿಗೆ ಹೋಗುವ ರಸ್ತೆಯಲ್ಲಿ ರೈಲ್ವೆ ಗೇಟ್ ಹತ್ತಿರ ಅಬಕಾರಿ ಅಧಿಕಾರಿಗಳೊಂದಿಗೆ ರಸ್ತೆ ಕಾವಲು ಮಾಡುತ್ತಿದ್ದೆವು ಬೆಳಗಿನ ಜಾವ ಸುಮಾರು 4.00 ಗಂಟೆಗೆ ಒಂದು ಟೆಂಪೊ ಟ್ರ್ಯಾಕ್ಸ್ ವಾಹನ ಬರುವುದನ್ನು ಕಂಡು ಅಧಿಕಾರಿಗಳು ಅದನ್ನು ಕೈ ಮಾಡಿ ನಿಲ್ಲಿಸಿದರು. ಅದನ್ನು ಶೋಧನೆ ಮಾಡಿ ಪರೀಕ್ಷಿಸಲಾಗಿ ಸದರಿ ವಾಹನ ಒಳಗಡೆ ಮದ್ಯದ ಬಾಟಲಿಗಳಿದ್ದ 36 ರಟ್ಟಿನ ಪೆಟ್ಟಿಗೆಗಳು ಇದ್ದವು ಮತ್ತು ಟೆಂಪೊ ಟ್ರ್ಯಾಕ್ಸನಲ್ಲಿ ಮೂರು (3) ಜನರಿದ್ದು ಅದರಲ್ಲಿ ಒಬ್ಬನು ವಾಹನ ನಡೆಸುತ್ತಿದ್ದನು. ಅಧಿಕಾರಿಗಳು ಆತನ ಹೆಸರನ್ನು ಕೇಳಲಾಗಿ ಆತನು ತನ್ನ ಹೆಸರು ಶ್ರೀಶೈಲ ತಂದೆ ಶರಣಪ್ಪ ಮಸಳಿ ಎಂದು ಹೇಳಿದನು. ಇನ್ನಿಬ್ಬರ ಹೆಸರುಗಳನ್ನು ಅವರುಗಳು ನಿಂಗಪ್ಪ ತಂದೆ ಶರಣಪ್ಪ ಮಸಳಿ ಹಾಗೂ ನಾಗಪ್ಪ ತಂದೆ ತಿಪ್ಪಣ್ಣ ಕನ್ನೂಳ್ಳಿ ಸಾ: ನಾಗಾಠಾಣ ಎಂದು ತಿಳಿಸಿದರು. ಸದರಿ ಮದ್ಯದ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ಯಾವುದಾದರೂ ಪರ್ಮಿಟ್ ಲೈಸೆನ್ಸ್ ಇವೆಯೇ? ಎಂದು ವಾಹನ ಚಾಲಕನನ್ನು ವಿಚಾರಿಸಲಾಗಿ ಆತನು ಯಾವುದೇ ಕಾಗದ ಪತ್ರಗಳು ಇಲ್ಲವೆಂದು ತಿಳಿಸಿದನು. ವಾಹನವನ್ನು ಪರಿಶೀಲಿಸಲಾಗಿ ವಾಹನ ಸಂಖ್ಯೆ: ಕೆಎ-28-ಎಂ-3243 ಎಂದು ಇತ್ತು. ಅಧಿಕಾರಿಗಳು ನಮ್ಮ ಸಮಕ್ಷಮದಲ್ಲಿ ಸದರಿ ರಟ್ಟಿನ ಬಾಕ್ಸ್‌ಗಳನ್ನು ಪರಿಶೀಲಿಸಲಾಗಿ, ಓರಿಜಿನಲ್ ಚಾಯಿಸ್ ಮದ್ಯದ 180 ಎಂಎಲ್‌ನ 1393 ಬಾಟಲಿಗಳು, ಓಲ್ಡ್‌ಮಂಕ್ ತ್ರಿಎಕ್ಸ್ ರಮ್ ಮದ್ಯದ 180 ಎಂಎಲ್‌ನ 336 ಬಾಟಲ್‌ಗಳು ಇದ್ದವು. ನಂತರ ಪ್ರತಿಯೊಂದು ಪೆಟ್ಟಿಗೆಯಿಂದ ನಮ್ಮ

ಸಮಕ್ಷಮ ರಸಾಯನಿಕ ಪರೀಕ್ಷೆಗಾಗಿ ಒಂದೊಂದರಂತೆ ಒಟ್ಟು 36 ಬಾಟಲ್‌ಗಳನ್ನು ಮಾದರಿಗಾಗಿ ತೆಗೆದು ತಮ್ಮ ಕಛೇರಿಯ ಸೀಲಿನಿಂದ ಸೀಲು ಮಾಡಿ ನಾವುಗಳು ಹಾಗೂ ಅಬಕಾರಿ ಅಧಿಕಾರಿಗಳು ಸಹಿ ಮಾಡಿದ ಚೀಟಿಗಳನ್ನು ಅಂಟಿಸಿದರು ಉಳಿದೆಲ್ಲ ಬಾಟಲ್‌ಗಳನ್ನು ಹಾಗೂ ವಾಹನವನ್ನು ಜಪ್ತು ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡರು ಸ್ಥಳದಲ್ಲಿಯೇ ಸವಿಸ್ತಾರವಾಗಿ ಪಂಚನಾಮೆಯನ್ನು ಬರೆದು ಮುಗಿಸಿದರು. ಈಗ ಅದರ ಪ್ರತಿಯನ್ನು ನೋಡುತ್ತಿದ್ದು, ಅದರ ಮೇಲೆ ನನ್ನ ಸಹಿ ಇದೆ. ಪಂಚನಾಮೆಯನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದೆ. ಅದರ ಮೇಲೆ ಇರುವ ನನ್ನ ಸಹಿಯನ್ನು ನಿಶಾನೆ ಪಿ-1(ಬಿ) ಎಂದು ಗುರುತಿಸಲಾಯಿತು. ಜಪ್ತು ಮಾಡಿದ ಮದ್ಯದ ಬಾಟಲ್‌ಗಳಿಗೆ ಹಾಗೂ ಮಾದರಿಯ ಬಾಟಲ್‌ಗಳನ್ನು ಈಗ ನೋಡುತ್ತಿದ್ದು, ಅವುಗಳನ್ನು ಈಗಾಗಲೇ ಮುದ್ದೇಮಾಲು 1 ಮತ್ತು 2 ಎಂದು ಗುರುತಿಸಲಾಗಿದೆ. ಮೂರು (3) ಜನ ಆರೋಪಿತರನ್ನು ಅಧಿಕಾರಿಗಳು ತಮ್ಮ ವಶಕ್ಕೆ ತೆಗೆದುಕೊಂಡರು ಎಂದು ವಿವರವಾದ ಸಾಕ್ಷಿ ನುಡಿದರು. ಈ ಸಾಕ್ಷಿಗೆ ವಾಹನ ಮಾಲಿಕರು ಯಾವುದೇ ಪಾಟೀ ಸವಾಲು ಮಾಡಿರುವುದಿಲ್ಲ. ಪಂಚ ಸಾಕ್ಷಿದಾರನ ಸಾಕ್ಷಿಯು ಅಭಿಯೋಗದ ಪರ ಪುಷ್ಠಿ ನೀಡುತ್ತದೆ.

ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಸಾಕ್ಷಿದಾರರ ಹೇಳಿಕೆಗಳನ್ನು ಮುಕ್ತಾಯಗೊಳಿಸಲಾಯಿತು ಎಂದು ತಿಳಿಸಿದರು. ನಂತರ ಪ್ರಕರಣವನ್ನು ವಾದ-ವಿವಾದಕ್ಕೆ ಮಂಡಿಸಲಾಯಿತು. ಪ್ರಾಸಿಕ್ಯೂಷನ್ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದವನ್ನು ಮಂಡಿಸಿದರು. ಆ ಸಮಯದಲ್ಲಿ ವಾಹನ ಮಾಲಿಕರು ಹಾಜರಿದ್ದರು ಯಾವುದೇ ಹೇಳಿಕೆಗಳನ್ನಾಗಲೀ ಅಥವಾ ವಿವಾದಗಳಾಲೀ ಮಂಡಿಸಿರುವುದಿಲ್ಲ ಮತ್ತು ಪ್ರಾಧಿಕಾರವು ಅವರನ್ನು ಪ್ರಶ್ನಿಸಲಾಗಿ ಯಾವುದೇ ಹೇಳಿಕೆಗಳು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪುರ ಇವರು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ ರಸಾಯನಿಕ ತಜ್ಞರು ಜಪ್ತು ಮಾಡಿದ ಮದ್ಯದಲ್ಲಿ ಮದ್ಯಸಾರದ ಅಂಶವು ಇರುತ್ತದೆ ಎಂದು ದೃಢಪಡಿಸಿರುತ್ತಾರೆ. ವಾಹನವನ್ನು ಜಪ್ತು ಮಾಡಿ ಕೆಲವು ತಿಂಗಳು ಕಳೆದರೂ ತನ್ನದೆಂದು ಯಾರು ಮುಂದೆ ಬಂದಿರುವುದಿಲ್ಲ. ವಾಹನವನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಿರುವುದರಿಂದ ವಾತಾವರಣದ ವೈಪರೀತ್ಯದಿಂದ ತನ್ನ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆಗಳು ಇರುತ್ತದೆ. ಸರ್ಕಾರದ ಆದಾಯದ ಹಿತದೃಷ್ಟಿಯಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ವಿನಂತಿಸಿರುತ್ತಾರೆ.

ಪ್ರಾಸಿಕ್ಯೂಷನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ:11.09.2005ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯದ ಪೆಟ್ಟಿಗೆಗಳು ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ಅಕ್ರಮ ಮದ್ಯದ ಪೆಟ್ಟಿಗೆಗಳು ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೆಯ ವಿವಾದಾಂಶ**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ ಸಕಾರಾತ್ಮಕ (ಹೌದು)**

ಪ್ರಾಸಿಕ್ಯೂಷನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರು ಹಾಗೂ ಇತರ ಸಾಕ್ಷಿದಾರರು ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಮದ್ಯ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯವು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ. ಸದರಿ ವಾಹನದಲ್ಲಿ ಮದ್ಯ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲಾ.

**ಎರಡನೆಯ ವಿವಾದಾಂಶಕ್ಕೆ ಉತ್ತರ -ಇಲ್ಲಾ-**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಇತನು ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತು ಆಗಿದ್ದು, ವಾಹನದ ಮಾಲಿಕನೇ ಸದರಿ ವಾಹನದ ಚಾಲಕನಾಗಿದ್ದು ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತು ಆಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲಿಕನು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ನೀಡಿರುವುದಿಲ್ಲಾ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲಿಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಪ್ರಾಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತುಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲಿ ಅಥವಾ ಸಾಕ್ಷ್ಯಾಧಾರಗಳಿಂದಾಗಲಿ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲಾ.

ಈ ಪ್ರಕರಣದಲ್ಲಿ ವಾಹನದ ಚಾಲಕನೇ ವಾಹನದ ಮಾಲಿಕ ಆಗಿರುವುದರಿಂದ ಈ ಕೃತ್ಯವು ತನ್ನ ತಿಳುವಳಿಕೆಯಿಂದಲೇ ನಡೆದಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

**ಮೂರನೇ ವಿವಾದಾಂಶಕ್ಕೆ ಉತ್ತರ -ಹೌದು-**

ಮೂರನೇ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ ಉಪ ವಿಭಾಗ ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ನಂತರ ನಿಯಮ 43(ಎ) 2 ರನ್ವಯ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಇವರ ಗುನ್ನೆ ನಂಬರ್: 06/ 2005-06 ರಲ್ಲಿ ಜಪ್ತು ಮಾಡಲ್ಪಟ್ಟ ವಾಹನ ನಂಬರ್: ಕೆಎ-28-ಎಂ-3243 (ಟೆಂಪೋ ಟ್ರ್ಯಾಕ್ಸ್) ಮತ್ತು 180 ಎಂಎಲ್‌ದ 1728 ಮದ್ಯ ತುಂಬಿದ ಬಾಟಲ್‌ಗಳು ಒಟ್ಟು 311-040 ಲೀಟರ್ ಮದ್ಯವನ್ನು (ರಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಪ್ರಕರಣದಲ್ಲಿ ಜಪ್ತು ಮಾಡಿದ 180 ಎಂಎಲ್‌ನ 1728 ಮದ್ಯ ತುಂಬಿದ ಬಾಟಲ್‌ಗಳು ಒಟ್ಟು 311-040 ಲೀಟರ್ ಮದ್ಯವನ್ನು (ರಸಾಯನಿಕ ವಿಶ್ಲೇಷಣೆಗಾಗಿ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ) ಅಬಕಾರಿ ಉಪ ಅಧಿಕ್ಷಕರು ಬಿಜಾಪುರ ಉಪವಿಭಾಗ ಇವರ ಸಮ್ಮುಖದಲ್ಲಿ ಪಂಚನಾಮೆ ಕ್ರಮ ಜರುಗಿಸಿ ಮದ್ಯವನ್ನು ನಾಶಪಡಿಸಲು ಮತ್ತು ಮದ್ಯವನ್ನು ನಾಶಪಡಿಸಿದ ನಂತರ ಉಳಿದ ಖಾಲಿ ಬಾಟಲಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ಆದೇಶಿಸಿದ್ದೇನೆ.

ಈ ಪ್ರಕರಣದಲ್ಲಿ ಬಂಧಿಸಲ್ಪಟ್ಟ ಎಲ್ಲ ಆರೋಪಿತರ ವಿರುದ್ಧ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ದೋಷಾರೋಪಣಾ ಪತ್ರವನ್ನು ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 06.01.2006 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು,
ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ.1** - ಧನುಸಿಂಗ್ ಸೋಮು ಚವ್ಹಾಣ ಫಿರ್ಯಾಧಿದಾರರು
ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ., ಬಿಜಾಪುರ ಜಿಲ್ಲೆ, ಬಿಜಾಪುರ.

**ಪ್ರಾ.ಸಾ.2** - ಪರಶುರಾಮ ಸಾಬು ಪೀಡಕರ ತನಿಖಾಧಿಕಾರಿ
ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ, ಬಿಜಾಪುರ ತಾಲ್ಲೂಕು ಕಛೇರಿ, ಬಿಜಾಪುರ.

**ಪ್ರಾ.ಸಾ.3** - ಜಾಂಗೀರ ಬಾಶ್ಯಾಸಾಬ ಪಠಾಣ ಪಂಚರು
ವಯಸ್ಸು 35 ಉದ್ಯೋಗ- ಕೂಲಿ, ಸಾ: ಬಿಜಾಪುರ.

**ಅನುಬಂಧ- 2**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ ಪಿ-1 | ಪಂಚನಾಮ. |
| ನಿಶಾನೆ ಪಿ-1(ಎ) | ಪ್ರಾ.ಸಾ. -1 ರವರ ಸಹಿ. |
| ನಿಶಾನೆ ಪಿ-1 (ಬಿ) | ಪಂಚರ ಸಹಿ. |
| ನಿಶಾನೆ ಪಿ-2 | ಪ್ರಥಮ ವರ್ತಮಾನ ವರದಿ. |
| ನಿಶಾನೆ ಪಿ-2(ಎ) | ಪ್ರಾ.ಸಾ. 1 ರವರ ಸಹಿ. |
| ನಿಶಾನೆ ಪಿ-3 | ರಸಾಯನಿಕ ತಜ್ಞರ ವರದಿಯ ಪ್ರತಿ. |

**ಅನುಬಂಧ- 3**

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

3) ಎಂ.ಓ.1 ವಾಹನ ನಂಬರ್ ಕೆಎ-28-ಎಂ-3243

4) ಎಂ.ಓ. -2 ಮಾದರಿ ಮದ್ಯಸಾರದ ಬಾಟಲ್‌ಗಳು

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು

-ಇಲ್ಲಾ-

**ಅನುಬಂಧ-5**

ವಾಹನದ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು

-ಇಲ್ಲಾ-

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು,
ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

ಪಿಆರ್. 249

**ಯೋಜನಾ ನಿರ್ದೇಶಕರ ಕಛೇರಿ, ಸುಜಲ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ,**
**8ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಸುಜಯೋ/ ವಿಶ್ವಬ್ಯಾಂಕ್/ ಆಡಳಿತ/ ಮಾಹಿತಿಯನ್ನು/ 2005-06, ದಿನಾಂಕ: 11ನೇ ಅಕ್ಟೋಬರ್, 2005**

**ವಿಷಯ:** ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರನ್ವಯ ಸುಜಲ ಜಲಾನಯನ ಯೋಜನೆಗೆ ಸಂಬಂಧಿಸಿದಂತೆ ಕೈಪಿಡಿಯನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಕೃತೋಇ-59- ಕೃತೋಸ 2005 ದಿನಾಂಕ: 08.09.2005.
2) ಇಲಾಖಾ ಇದೇ ಸಮಸಂಖ್ಯೆ ಆದೇಶ ದಿನಾಂಕ: 14.09.2005.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 (2005ರ ಕೇಂದ್ರ ಕಾಯಿದೆ ಸಂಖ್ಯೆ 22)ರ ಪ್ರಕಾರ ಅಧಿನಿಯಮದ ಕಂಡಿಕೆ 4(1)(ಬಿ) ಪ್ರಕಾರ ಜಲಾನಯನ ಅಭಿವೃದ್ಧಿ ಇಲಾಖೆಯ ಸುಜಲ ಜಲಾನಯನ ಯೋಜನೆಯ ಯೋಜನಾ ನಿರ್ದೇಶಕರ ಕಛೇರಿಯ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರ ಕರ್ತವ್ಯದ ಬಗ್ಗೆ ಸಂಕ್ಷಿಪ್ತ ವಿವರಗಳನ್ನೊಳಗೊಂಡಂತೆ ಸಾರ್ವಜನಿಕ ಮಾಹಿತಿ ಕೈಪಿಡಿಯನ್ನು ಪ್ರಕಟಿಸಲಾಗಿದೆ.

**ಇಲಾಖೆಯ ಸಂಕ್ಷಿಪ್ತ ವಿವರ:**

ಜಲಾನಯನ ಅಭಿವೃದ್ಧಿ ಇಲಾಖೆಯಡಿ ವಿಶ್ವಬ್ಯಾಂಕ್ ನೆರವಿನ ಸುಜಲ ಜಲಾನಯನ ಯೋಜನೆಯು ಕಾಲಮಿತಿ ಯೋಜನೆಯಾಗಿ ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ 17 ಎಎಂಎಲ್ 98 (ಸಂಪುಟ 2) ದಿನಾಂಕ: 02.03.2002ರಂದು ಮಂಜೂರಾಯಿತು. ಈ ಯೋಜನೆ ವತಿಯಿಂದ ಕರ್ನಾಟಕ ಆಯ್ದ 5 ಜಿಲ್ಲೆಗಳಲ್ಲಿ (ಕೋಲಾರ, ತುಮಕೂರು, ಚಿತ್ರದುರ್ಗ, ಹಾವೇರಿ ಮತ್ತು ಧಾರವಾಡ) ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ 5.19 ಲಕ್ಷ ಹೆಕ್ಟೇರ್ ಭೂಪ್ರದೇಶವನ್ನು ಸ್ಥಳೀಯ ಜನರ ಭಾಗವಹಿಸುವಿಕೆಯ ಮೂಲಕ ಅಭಿವೃದ್ಧಿಗೊಳಿಸಲು ಸುಜಲ ಜಲಾನಯನ ಯೋಜನೆ ಪ್ರಾರಂಭಗೊಂಡಿರುತ್ತದೆ. ಇದು ಜನರಿಂದ, ಜನರಿಗಾಗಿ, ಜನರಿಗೋಸ್ಕರ ಇರುವ ಕಾರ್ಯಕ್ರಮ ಇಲಾಖೆಯು ಕೇವಲ ಮಾರ್ಗದರ್ಶಿಯಾಗಿ ಜನರ ಸಮುದಾಯ ಸಂಘಟನೆಗಳಿಗೆ ತಾಂತ್ರಿಕ, ಹಣಕಾಸಿನ ಹಾಗೂ ಆಡಳಿತಾತ್ಮಕ ನೆರವು ಹಾಗೂ ಸಹಕಾರ ನೀಡುತ್ತದೆ.

ಸರ್ಕಾರದ ಆದೇಶದಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆಯೊಂದಿಗೆ ಸ್ವಯಂ ಸೇವಾ ಸಂಸ್ಥೆಗಳು ಸಾಮಾಜಿಕ ಸಂಘಟನೆ ಹಾಗೂ ಸಾಮರ್ಥ್ಯ ಅಭಿವೃದ್ಧಿ ಕೆಲಸದ ಮೂಲಕ ಸಮುದಾಯ ಸಂಸ್ಥೆಗಳನ್ನು ಕಟ್ಟಲು ಯೋಜನೆಯ ಪಾಲುದಾರರಾಗಿ ಕೆಲಸ ಮಾಡುತ್ತಿದ್ದಾರೆ. ಯೋಜನೆಯ ಅವಧಿಯು $5^1/_2$ ವರ್ಷಗಳಾಗಿದ್ದು ಸೆಪ್ಟೆಂಬರ್ 2001 ರಿಂದ ಪ್ರಾರಂಭಗೊಂಡಿದ್ದು ಮಾರ್ಚ್ 2007ಕ್ಕೆ ಮುಕ್ತಾಯಗೊಳ್ಳುತ್ತದೆ.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಯೋಜನಾ ಅಧಿಕಾರಯುಕ್ತ ಸಮಿತಿಗೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಅಧ್ಯಕ್ಷರಾಗಿದ್ದು ಇಲಾಖಾ ಮಟ್ಟದಲ್ಲಿ ಯೋಜನಾ ನಿರ್ದೇಶಕರು, ಸುಜಲ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರು ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ ಅಪರ ಯೋಜನಾ ನಿರ್ದೇಶಕರು (ಯೋಜನಾ ಮತ್ತು ಸಮನ್ವಯ) ಅಪರ ಯೋಜನಾ ನಿರ್ದೇಶಕರು (ಮಾನವ ಸಂಪನ್ಮೂಲ) ಅಪರ ಯೋಜನಾ ನಿರ್ದೇಶಕರು (ಆಡಳಿತ ಮತ್ತು ಸಂಗ್ರಹಣೆ) ಮುಖ್ಯ ಲೆಕ್ಕಾಧಿಕಾರಿಗಳು ಅಪರ ಯೋಜನಾ ನಿರ್ದೇಶಕರು (ಅರಣ್ಯ ಮತ್ತು ಪರಿಸರ) ಅಪರ ಯೋಜನಾ ನಿರ್ದೇಶಕರು (ಸಾಮಾಜಿಕ ಮತ್ತು ಆದಾಯ ಉತ್ಪಾದನಾ ಚಟುವಟಿಕೆ) ಅಪರ ಯೋಜನಾ ನಿರ್ದೇಶಕರು (ಭೂಸಾರ ಸಂರಕ್ಷಣೆ) ಅಪರ ಯೋಜನಾ ನಿರ್ದೇಶಕರು (ದಾಖಲಾತಿ ಮತ್ತು ಪ್ರಚಾರ) ಅಪರ ಯೋಜನಾ ನಿರ್ದೇಶಕರು (ಸಂಶೋಧನೆ ಮತ್ತು ಪ್ರಾತ್ಯಕ್ಷತೆ), ಅಪರ ಯೋಜನಾ ನಿರ್ದೇಶಕರು (ಯೋಜನೆ), ಅಪರ ಯೋಜನಾ ನಿರ್ದೇಶಕರು (ತೋಟಗಾರಿಕೆ), ಅಪರ ಯೋಜನಾ ನಿರ್ದೇಶಕರು (ಜಾಗೃತದಳ), ಅಪರ ಯೋಜನಾ ನಿರ್ದೇಶಕರು (ಜಾನುವಾರು), ಭೂಜಲ ತಜ್ಞರು ಇವರುಗಳು ಆಯಾ ಘಟಕಗಳ ಮುಖ್ಯಸ್ಥರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ ಯೋಜನಾಧಿಕಾರಿ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು ಇದ್ದು, ಇವರ ಅಧೀನದಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಸಹಾಯಕ ತೋಟಗಾರಿಕೆ ನಿರ್ದೇಶಕರು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಘಟಕಗಳ ಅಧಿಕಾರಿಗಳಾಗಿರುತ್ತಾರೆ. ಈ ಘಟಕಗಳಿಗೆ ಪ್ರತ್ಯೇಕವಾಗಿ ಕಛೇರಿ ಮತ್ತು ಸಿಬ್ಬಂದಿ ಇರುತ್ತದೆ.

ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ 87 ಸರ್ಕಾರೇತರ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ರಾಜ್ಯಮಟ್ಟದಲ್ಲಿ ಮೈರಾಡ ಪಾಲುದಾರ ಸರ್ಕಾರೇತರ ಸಂಸ್ಥೆ, ಜಿಲ್ಲಾಮಟ್ಟದಲ್ಲಿ ತುಮಕೂರು-ಬೈಫ್, ಕೋಲಾರ-ಮೈರಾಡ, ಚಿತ್ರದುರ್ಗ-ಮೈರಾಡ, ಹಾವೇರಿ-ಐ.ಡಿ.ಎಸ್., ಧಾರವಾಡ-ಐ.ಡಿ.ಎಸ್., ಮುಂದಾಳತ್ವ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಉಪ ಜಲಾನಯನ ಮಟ್ಟದಲ್ಲಿ 77 ಕ್ಷೇತ್ರ ಸರ್ಕಾರೇತರ ಸಂಸ್ಥೆಗಳು ಇದ್ದು ಇದರ ಜೊತೆಗೆ ಆದಾಯ ಉತ್ಪನ್ನ ಚಟುವಟಿಕೆಗಳನ್ನು ನಿರ್ವಹಿಸಲು ಸಿಡಾಕ್, ಐ.ಡಿ.ಎಫ್. ಅವೇಕ್ ಹಾಗೂ ರೂಡ್ಸೆಟ್ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಇಸ್ರೋ ಆಂಟ್ರಿಕ್ಸ್, ಕರ್ನಾಟಕ ದೂರ ಸಂವೇದಿ ತಂತ್ರಜ್ಞಾನ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಹಾಗೂ ಧಾರವಾಡ, ವೈ.ಸಿ.ಕೆ. ಅಸೋಸಿಯೇಟ್ಸ್ (ಆಡಿಟ್), ರವಿ ಅಂಡ್ ಅಯ್ಯರ್ ಸಂಸ್ಥೆ (ಲೆಕ್ಕಪತ್ರ), ಸಾಮಾಜಿಕ ವಿಜ್ಞಾನ (ಐ.ಎಸ್.ಎಸ್.), ಎಂಪ್ರಿ, ಇಕ್ರಿಸ್ಯಾಟ್, ಐ.ಐ.ಹೆಚ್.ಆರ್.ಎಸ್. ಹಾಗೂ ಐ.ಬಿ.ಆರ್.ಐ. ಇವರುಗಳು ಯೋಜನೆಯ ಪಾಲುದಾರರಾಗಿರುತ್ತಾರೆ. ವಿವರವಾದ ವಿಳಾಸ ಈ ಕೆಳಕಂಡಂತಿದೆ.

| **ಪಾಲುದಾರ ಕ್ಷೇತ್ರ ಸರ್ಕಾರೇತರ ಸಂಸ್ಥೆ** | |
|---|---|
| ದೂರವಾಣಿ: 080-253520238, 25353166<br>ಫ್ಯಾಕ್ಸ್: 25350982<br>ಇ.ಮೇಲ್: myrada@vsnl.com amd myrada@blr.vsnl.net.in. ಸಿ.ಪಿ.: ಶ್ರೀ ಹೊಳೆಜ್ಞರ್. | ಸಮನ್ವಯಾಧಿಕಾರಿಗಳು, ಮೈರಾಡ,<br>ನಂ.2, ಸರ್ವೀಸ್ ರಸ್ತೆ, ದೊಮ್ಮಲೂರು ಲೇಔಟ್,<br>ಬೆಂಗಳೂರು-560 071. |
| **ಮುಂದಾಳು ಸರ್ಕಾರೇತರ ಸಂಸ್ಥೆ** | |
| ದೂರವಾಣಿ: 958153-359033/359034 (ಕಾಮಸಮುದ್ರ)<br>ಫ್ಯಾಕ್ಸ್: 08152-241029 (ಕೋಲಾರ)<br>ಇ.ಮೇಲ್: myradalngo@yahoo.co.in<br>ಸಿ.ಪಿ.: ರೋಹನ್ ಮಲ್ಲಿಕ್. | ಯೋಜನಾ ಸಮನ್ವಯಾಧಿಕಾರಿಗಳು, ಮೈರಾಡ,<br>ಕಾಮಸಮುದ್ರ- 563 129, ಬಂಗಾರಪೇಟೆ ತಾಲ್ಲೂಕು,<br>ಕೋಲಾರ ಜಿಲ್ಲೆ. |

| | |
|---|---|
| ದೂರವಾಣಿ: 958134-254421, 250659, 2513387<br>ಫ್ಯಾಕ್ಸ್: 0816-2292191 (ತುಮಕೂರು)<br>ಮೊಬೈಲ್: 9448478814,<br>ಇ.ಮೇಲ್: baifl@sancharnet.in; baifsujala@indiatimes.com<br>ಸಿ.ಪಿ.: ಮಲ್ಲಿಕಾರ್ಜುನ್ ಕೆ. | ಯೋಜನಾ ನಿರ್ದೇಶಕರು, ಬೈಫ್,<br>ಪಿ.ಬಿ. ನಂ.3, ಶಾರದಾನಗರ, ಹಾಸನ ರಸ್ತೆ, ತಿಪಟೂರು- 572 202<br>ಮತ್ತು ಟೀಮ್ ಲೀಡರ್, ಬೈಫ್, ಹೇಮಂತ ನಿಲಯ, 5ನೇ ಕ್ರಾಸ್,<br>ವಿಜಯನಗರ, ದೇವನೂರು ಮುಖ್ಯರಸ್ತೆ, ತುಮಕೂರು ಜಿಲ್ಲೆ. |
| ದೂರವಾಣಿ: 958194-231470, 231567<br>ಫ್ಯಾಕ್ಸ್:<br>ಮೊಬೈಲ್: 9448466273,<br>ಇ.ಮೇಲ್: myraddap@sancharnet.in<br>ಸಿ.ಪಿ.: ಪಿ. ವಿಜಯಕುಮಾರ್. | ಯೋಜನಾ ಸಮನ್ವಯಾಧಿಕಾರಿಗಳು, ಮೈರಾಡ,<br>ವಿ.ಪಿ. ಎಕ್ಸ್‌ಟೆನ್‌ಶನ್, ತೋಟಗಾರಿಕೆ ಕಛೇರಿ ರಸ್ತೆ,<br>ಚಿತ್ರದುರ್ಗ- 577 501. |
| ದೂರವಾಣಿ: 958375-232695<br>ಫ್ಯಾಕ್ಸ್:<br>ಮೊಬೈಲ್: 9845912492 (ಆರ್.ಬಿ. ಪಾಟೀಲ್)<br>ಇ.ಮೇಲ್: ids_hrv@sancharnet.in<br>ಸಿ.ಪಿ.: ಆರ್.ಬಿ. ಪಾಟೀಲ್ ಹಾಗೂ ಎಸ್.ಎನ್.ಸಾನು. | ಯೋಜನಾ ಸಂಯೋಜಕರು, ಇಂಡಿಯಾ ಡೆವಲಪ್‌ಮೆಂಟ್ ಸರ್ವಿಸ್,<br>ಡಾ: ಲೋಡಾಯಾ ಆಸ್ಪತ್ರೆ, 1ನೇ ಮಹಡಿ, ಅಶ್ವಿನಿ ನಗರ,<br>ಹಾವೇರಿ-581 110. |
| ದೂರವಾಣಿ: 95836-2447207/ 2786414<br>ಫ್ಯಾಕ್ಸ್: 243558/ 5556116<br>ಮೊಬೈಲ್: 9845704580 (ಮೀರಾ),<br>ಇ.ಮೇಲ್: idsl@sancharnet.in<br>ಸಿ.ಪಿ.: ಆರ್.ಬಿ. ಹಿರೇಮಠ್. | ಮುಖ್ಯ ಕಾರ್ಯನಿರ್ವಾಹಕರು,<br>ಇಂಡಿಯಾ ಡೆವಲಪ್‌ಮೆಂಟ್ ಸರ್ವಿಸ್, ಜರ್ಮನ ಆಸ್ಪತ್ರೆ ಹತ್ತಿರ,<br>ಸಾಧನಕೇರಿ ರಸ್ತೆ, ಧಾರವಾಡ-580 008. |
| **ಮೊದಲ ಹಂತದ ಕ್ಷೇತ್ರ ಸರ್ಕಾರೇತರ ಸಂಸ್ಥೆ** | |
| ದೂರವಾಣಿ: 958159-244246/ 237152<br>ಫ್ಯಾಕ್ಸ್: 542372<br>ಮೊಬೈಲ್: 9448083246,<br>ಇ.ಮೇಲ್: prakruthil@rediffmail.com<br>ಸಿ.ಪಿ.: ಪಿ. ನಾರಾಯಣಪ್ಪ. | ತಂಡದ ಮುಖ್ಯಸ್ಥರು, ಪ್ರಕೃತಿ, ಉತ್ತನೂರು ಕಿರಿಜಲಾನಯನ<br>ಯೋಜನೆ, ಸೀಗೇನಹಳ್ಳಿ, ಕೊಪ್ಪಲಮಡುಗು ಅಂಚೆ,<br>ಮುಳಬಾಗಿಲು-563 131, ಕೋಲಾರ ಜಿಲ್ಲೆ. |
| ದೂರವಾಣಿ: 958155-282129/ 286084<br>ಫ್ಯಾಕ್ಸ್: 586084<br>ಮೊಬೈಲ್:<br>ಇ.ಮೇಲ್: ndats_gbd@rediffmail.com<br>ಸಿ.ಪಿ.: ಎಸ್.ಎಸ್. ರೆಡ್ಡಿ. | ಯೋಜನಾ ನಿರ್ದೇಶಕರು, ಗ್ರಾಮೀಣ ಅಭಿವೃದ್ಧಿ ಮತ್ತು ತರಬೇತಿ<br>ಸಂಸ್ಥೆ (ಆರ್.ಡಿ.ಎ.ಟಿ.ಎಸ್) ಕುಮದ್ವತಿ ಕಿರು ಜಲನಯನ ಯೋಜನೆ,<br>ಪ್ರಶಾಂತನಗರ, ಕಲ್ಲುಡಿ ಅಂಚೆ, ಗೌರಿಬಿದನೂರು-561 208,<br>ಕೋಲಾರ ಜಿಲ್ಲೆ. |
| ದೂರವಾಣಿ: 958135-277372/ 205804<br>ಫ್ಯಾಕ್ಸ್:<br>ಮೊಬೈಲ್: 9845451048/ 9448241494.<br>ಇ.ಮೇಲ್: ngomother@rediffmail.com<br>ಸಿ.ಪಿ.: ಬೈಲಪ್ಪ/ ವೀರಭಾಸ್ಕರ್. | ಯೋಜನಾ ನಿರ್ದೇಶಕರು, ಮದರ್, ಜ್ಯೋತಿನಗರ,<br>ಸಿರಾ-572137, ತುಮಕೂರು ಜಿಲ್ಲೆ. |
| ದೂರವಾಣಿ: 958134-254421/ 250659<br>ಫ್ಯಾಕ್ಸ್:<br>ಮೊಬೈಲ್: 9448582973<br>ಇ.ಮೇಲ್: baif5@vsnl.com<br>ಸಿ.ಪಿ.: ಚಂದ್ರಶೇಖರ್. | ತಂಡದ ಮುಖ್ಯಸ್ಥರು,<br>ಬೈಫ್-ಬರ್ಡ್-ಕೆ, ಬಿ.ಕೆ.ಹಳ್ಳ ಕಿರು ಜಲಾನಯನ ಯೋಜನೆ,<br>ಹರಿಸಮುದ್ರ, ಸಾರ್ತವಳ್ಳಿ ಅಂಚೆ, ತಿಪಟೂರು ತಾಲ್ಲೂಕು,<br>ತುಮಕೂರು ಜಿಲ್ಲೆ. |
| ದೂರವಾಣಿ: 958195-206759/ 254636<br>ಫ್ಯಾಕ್ಸ್:<br>ಮೊಬೈಲ್:<br>ಇ.ಮೇಲ್:<br>ಸಿ.ಪಿ.: ಕೃಷ್ಣ ನಾಯಕ್. | ತಂಡದ ಮುಖ್ಯಸ್ಥರು, ವಂದನ, ಸಿ.ಎನ್. ಹಳ್ಳ ಕಿರು ಜಲಾನಯನ<br>ಯೋಜನೆ, ಪರಶುರಾಮಪುರ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. |
| ದೂರವಾಣಿ:<br>ಫ್ಯಾಕ್ಸ್:<br>ಮೊಬೈಲ್: 9845596641<br>ಇ.ಮೇಲ್:<br>ಸಿ.ಪಿ.: ಡಿ.ಜಿ. ಚಿಕ್ಕೇರಿ. | ತಂಡದ ಮುಖ್ಯಸ್ಥರು, ಇಂಡಿಯಾ ಡೆವಲಪ್‌ಮೆಂಟ್ ಸರ್ವಿಸ್,<br>ಸುವರ್ಣಮುಖಿ ಕಿರು ಜಲಾನಯನ ಯೋಜನೆ, ಕೋಡಿಹಳ್ಳಿ ಅಂಚೆ,<br>ಅರಣಕಟ್ಟೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. |

| | |
|---|---|
| ದೂರವಾಣಿ: 958375-232695<br>ಫ್ಯಾಕ್ಸ್:<br>ಮೊಬೈಲ್:<br>ಇ.ಮೇಲ್: ids_hvr@sancharnet.in<br>ಸಿ.ಪಿ.: ಎಂ.ಎನ್. ಹೊಸಮನಿ. | ತಂಡದ ಮುಖ್ಯಸ್ಥರು,<br>ಇಂಡಿಯಾ ಡೆವಲಪ್‌ಮೆಂಟ್ ಸರ್ವಿಸ್, ಗುತ್ತಲ ಕಿರು ಜಲಾನಯನ ಯೋಜನೆ, ಗುತ್ತಲ, ಹಾವೇರಿ-581 110. |
| ದೂರವಾಣಿ: 958373-360111<br>ಫ್ಯಾಕ್ಸ್:<br>ಮೊಬೈಲ್: 9880256754 (ಬಳಿಗರ್)<br>ಇ.ಮೇಲ್: needhvr@sancharnet.in<br>ಸಿ.ಪಿ.: ಹನುಮಂತರೆಡ್ಡಿ. | ತಂಡದ ಮುಖ್ಯಸ್ಥರು, ನೀಡ್ಸ್, (ನವೋದಯ ಎಜುಕೇಷನಲ್ ಅಂಡ್ ಎನ್ವಿರಾನ್‌ಮೆಂಟಲ್ ಸರ್ವಿಸ್) ಸಂಗಮ ಟಾಕೀಸ್ ಹಿಂಭಾಗ, ರಾಣಿಬೆನ್ನೂರು-581 115, ಹಾವೇರಿ ಜಿಲ್ಲೆ. |
| ದೂರವಾಣಿ: 95836-5576740<br>ಫ್ಯಾಕ್ಸ್:<br>ಮೊಬೈಲ್:<br>ಇ.ಮೇಲ್: ids_dharwad@vsnl.com<br>ಸಿ.ಪಿ.: ಎಸ್.ಎಂ. ಹೂಗಾರ್. | ತಂಡದ ಮುಖ್ಯಸ್ಥರು,<br>ಇಂಡಿಯಾ ಡೆವಲಪ್‌ಮೆಂಟ್ ಸರ್ವಿಸ್, ಮನಗುಂಡಿ ಕಿರು ಜಲಾನಯನ ಯೋಜನೆ, ಮನಗುಂಡಿ, ಧಾರವಾಡ ಜಿಲ್ಲೆ. |
| ದೂರವಾಣಿ: 958370-725039<br>ಫ್ಯಾಕ್ಸ್:<br>ಮೊಬೈಲ್:<br>ಇ.ಮೇಲ್: vimochanal@rediffmail.com<br>ಸಿ.ಪಿ.: ವಿನೋದ್ ಪಿ. ಜಾರ್ಜ್. | ತಂಡದ ಮುಖ್ಯಸ್ಥರು,<br>ವಿಮೋಚನಾ ಅಭಿವೃದ್ಧಿ ಸಂಸ್ಥೆ, ಹುಲಕೊಪ್ಪ ಕಿರು ಜಲಾನಯನ ಯೋಜನೆ, ಕಲಘಟಗಿ-581 204, ಧಾರವಾಡ ಜಿಲ್ಲೆ. |
| **2ನೇ ಹಂತದ ಕ್ಷೇತ್ರ ಸರ್ಕಾರೇತರ ಸಂಸ್ಥೆ** | |
| ದೂರವಾಣಿ: 08153-259034<br>ಫ್ಯಾಕ್ಸ್:<br>ಮೊಬೈಲ್: 9448178549<br>ಇ.ಮೇಲ್: spoorthycodor@yahoo.com<br>ಸಿ.ಪಿ.: ಶ್ರೀಕಂಠ ಮೂರ್ತಿ. | ತಂಡದ ಮುಖ್ಯಸ್ಥರು,<br>ಮೈರಾಡ, ಮರಾತಾಹೊಸಹಳ್ಳಿ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ. |
| ದೂರವಾಣಿ: 08151-236656<br>ಫ್ಯಾಕ್ಸ್:<br>ಮೊಬೈಲ್:<br>ಇ.ಮೇಲ್: bmsss@vsnl.com & arul 1969@rediffmail.com<br>ಸಿ.ಪಿ.: ಅರುಳಪ್ಪ ಆರ್.<br>ಕೇಂದ್ರ ಕಛೇರಿ: 080-23334962/ 23330437 | ತಂಡದ ಮುಖ್ಯಸ್ಥರು,<br>ಬಿ.ಎಂ.ಎಸ್.ಎಸ್.ಎಸ್. (BMSSS) ಮಾಸ್ತಿ ದೊಡ್ಡಕೆರೆ ಕಿರು ಜಲಾನಯನ ಯೋಜನೆ, ಕೆ.ಆರ್. ಶಾಂತಕುಮಾರರವರ ಮನೆ, ಇಂದಿರಾನಗರ, ಮಾಸ್ತಿ-563 139, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. |
| ದೂರವಾಣಿ: 08150-289454/ 08154-255941<br>ಫ್ಯಾಕ್ಸ್:<br>ಮೊಬೈಲ್: 9845567485<br>ಇ.ಮೇಲ್: rsced@rediffmail.com<br>ಸಿ.ಪಿ.: ಭಾಸ್ಕರ್. | ತಂಡದ ಮುಖ್ಯಸ್ಥರು,<br>ರಿಸೋರ್ಸ್ ಸರ್ವೀಸ್ ಸೆಂಟರ್ (ಆರ್.ಎಸ್.ಸಿ.) ಸುಜಲ ಲಕ್ಕಸಂದ್ರ ಉಪಜಲಾನಯ, ರಾಚಾವರಪಳ್ಳಿ, ಸೋಮನಾಥಪುರ ಅಂಚೆ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ-561 212. |
| ದೂರವಾಣಿ: 08156-279547<br>ಫ್ಯಾಕ್ಸ್:<br>ಮೊಬೈಲ್: 9448234697-ವಾಸು-/ 9448523941 9448563651 (ಉಮ)<br>ಇ.ಮೇಲ್:<br>ಸಿ.ಪಿ.: ಆರ್. ಜನಾರ್ಧನ್ | ತಂಡದ ಮುಖ್ಯಸ್ಥರು,<br>ಡೆವಲಪ್‌ಮೆಂಟ್ ಪ್ರಮೋಷನ್ ಗ್ರೂಪ್, (ಡಿ.ಪಿ.ಜಿ.) ಸುಜಲ ಜಲಾನಯನ ಯೋಜನೆ, ಬಾಳೇನಹಳ್ಳಿ, ಬೀಚಗಾನಹಳ್ಳಿ ಅಂಚೆ, ಗುಡಿಬಂಡೆ ತಾಲ್ಲೂಕು, ಕೋಲಾರ ಜಿಲ್ಲೆ. |
| ದೂರವಾಣಿ: 0857-248832/ 246278/ 246181 (ಹೆಚ್.ಒ) 958136 247322<br>ಇ.ಮೇಲ್: ores@rediffmail.com<br>ಸಿ.ಪಿ.: ಸತ್ಯಪ್ಪ. | ತಂಡದ ಮುಖ್ಯಸ್ಥರು,<br>ರಿ ಆರ್ಗನೈಜೇಶನ್ ಆಫ್ ರೂರಲ್ ಎಕಾನಮಿ ಅಂಡ್ ಸೊಸೈಟಿ (RORES) ಪುಳಗುರ್‌ಕೋಟೆ ರಸ್ತೆ, ಶ್ರೀನಿವಾಸಪುರ-563135, ಕೋಲಾರ ಜಿಲ್ಲೆ. |
| ದೂರವಾಣಿ: 958136-244232 (ಕೇಂದ್ರ ಕಛೇರಿ)<br>ಫ್ಯಾಕ್ಸ್: 08132-202044<br>ಮೊಬೈಲ್: 9880094799<br>ಇ.ಮೇಲ್:<br>ಸಿ.ಪಿ.: ಶ್ರೀನಿವಾಸ್. | ತಂಡದ ಮುಖ್ಯಸ್ಥರು,<br>ವೆಡ್ಸ್, ಕಿರು ಜಲಾನಯನ ಯೋಜನೆ, ಮಂಜುನಾಥ ನಿಲಯ, ವೈ.ಎನ್. ಹೊಸಕೋಟೆ-572141, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. |

